# ಚಿತ್ರಸೃಷ್ಟಿ

ಶ್ರೀ ಸಾಲಿ ರಾಮಚಂದ್ರರಾಯರ

ಕವನ ಸಂಗ್ರಹ



ಸಂಪಾದಕರು:

ಶ್ರೀ ದೇಸಾಯಿ ಪಾಂಡುರಂಗರಾಯ ಎಂ. ಎ.

ವಿಜಯನಗರ ಸಾಮ್ರಾಜ್ಯ, ಮಿಂಚಿದ ಮಹಿಳೆಯರು, ಕನ್ನಡ ಅರಸರು,
ಗ್ರಂಥಗಳ ಕರ್ತರು.

ಚಾ. ವಿ. ವ. ೮೬೪




ಕ್ರಿ. ವ. ೧೯೪೦

# ಮುನ್ನುಡಿ

ಬ್ರಹ್ಮಸೃಷ್ಟಿಯಲ್ಲಿ ಮಿಂಚುಹುಳಗಳು ಜೇನು ಮಾಡವು, ಜೇನು ಹುಳಗಳು ಮಿಂಚು ನೀಡವು. ಕವಿಗಳ ಚಿತ್ರಸೃಷ್ಟಿಯಲ್ಲಾದರೆ ಒಮ್ಮೊಮ್ಮೆ, ಯ್ಯಾದ ವಾಗರ್ಥದ ಹೊರಗೊಳಗಣ ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ. ಆ ನವಾಯಿಯನ್ನು ಕಾಂಬಾತನಿಗೆ ಕವಿತಾದೃಷ್ಟಿ ಬೇಕು. ನೆಲದಲ್ಲಿ ನಡೆವ ಕಾಲಿನಿಂದ ಹಕ್ಕಿ ಗಾಳಿಯಲ್ಲಿ ಹಾರಲಾರದಂತೆ, ಕವಿಯ ಅಂತರ್ದೃಷ್ಟಿಯಿಂದಲ್ಲದೆ ಅವನ ಚಿತ್ರಸೃಷ್ಟಿಯನ್ನು ಕಾಣಲಾಗದು. ಅಥವಾ ಮನುಷ್ಯನೇನು ಸ್ವಭಾವತಃ ಕವಿಯೂ ಅಲ್ಲವೆ? ಸುಖದುಃಖಗಳಿಂದ ಎದೆಯುಕ್ಕಿ ತನ್ನನ್ನು ತಾನು ಮರೆವಂದು ಯಾರು ತಾನೆ ಕವಿಯಲ್ಲ? ಆ ಮರವೆಯಲ್ಲಿ ಯಾವ ಹಾಡುಗಳು ಆತನ ಹೃದಯದಿಂದ ಹುಯ್ದು ಹೋಗಿಲ್ಲ? ಭೇದವಿಷ್ಟೇ, ನೈತ್ಯಿಕವೂ ನೈಮಿತ್ತಕವೂ ಎಂದು, ಹೊಳೆಯ ಹರಿತಕ್ಕೂ ಮಳೆಯ ಸುರಿತಕ್ಕೂ ಇರುವಂತೆ. ಹೃದಯವು ನೈತ್ಯಿಕವಾಗಿ ಹರಿದರೆ ಕವಿ, ನೈಮಿತ್ತಿಕವಾಗಿ ಸುರಿದರೆ ಭವಿ. ಹೆತ್ತಿಲ್ಲದವರು ಹೆರಿಗೆಯ ಸುಖದುಃಖಗಳನ್ನು ಅರಿಯರಾದರೂ ಅವರಲ್ಲಿಯೂ ಎಷ್ಟೋ ಮಂದಿಯ ಹೃದಯದಲ್ಲಿ ತಾಯಿತನದ ಹಾಲೂ ಇರುವಂತೆ, ಕವನಿಸಿಲ್ಲದವರು ಕವನದ ಸುಖದುಃಖಗಳನ್ನು ಅರಿಯರಾದರೂ ಅವರಲ್ಲಿಯೂ ಎಷ್ಟೋ ಮಂದಿಯ ಹೃದಯದಲ್ಲಿ ಕವಿತಾದೃಷ್ಟಿಯೂ ಇದೆ. ಅಂಜನವನ್ನು ತೊಡೆದ ಕಣ್ಣೇ ಕಣ್ಣಿನ ಎಲ್ಲೆಯನ್ನು ಹಿಂದಿಕ್ಕಿ ಯಾವ ಕಗ್ಗತ್ತಲಲ್ಲಿಯೂ ಯಾವ ನಿಬ್ಬೆಳಕಿನಲ್ಲಿಯೂ ಕಾಣಿಸುವಂತೆ, ಸ್ನಿಗ್ಧವಾದ ಕವಿತಾದೃಷ್ಟಿಯಿಂದ ಕಂಡಲ್ಲದೆ ಕವಿಗಳ ಚಿತ್ರಸೃಷ್ಟಿಯ ಸೌಂದರ್ಯವೂ ಹೊಳೆಯದು, ಅವರ ಮನಗಾರಿಕೆಯ ಕೌಶಲವೂ ತಿಳಿಯದು. ಅಥವಾ ಹೆಚ್ಚೇಕೆ? ಅನ್ಯಥಾ ಓದಿದ ಕಾವ್ಯವು ಹಕ್ಕಿಗಳನ್ನು ಸೋವ ಗಿರುಗಟಿಯಂತೆ ಶಬ್ದಸ್ತೋಮವಷ್ಟೇ.

ಶ್ರೀ ಸಾಲಿ ರಾಮಚಂದ್ರರಾಯರು ನಿನ್ನೆಮೊನ್ನೆಯ ಕವಿಯಲ್ಲ, ಹಲವು ವರ್ಷಗಳಿಂದ ಕವನಿಸುತ್ತಲಿರುವ ಹೆಸರುವಾಸಿಯಾದ ಕವಿ

ಇಂದಿನ ಕನ್ನಡ ಕಾವ್ಯಸಾಹಿತ್ಯದ ಪುರೋರಥರಲ್ಲೊಬ್ಬರು. ಅವರ ಕವಿತೆಗಳು ಎಷ್ಟೋ ವರ್ಷಗಳಿಂದ ಆಯಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಅವನ್ನು ಓದದ ಕನ್ನಡಿಗರಿಲ್ಲ, ಮೆಚ್ಚದ ಓದುಗರಿಲ್ಲ. ಅಂಥವರ ಕವಿತೆಗಳಿಗೂ ಮುನ್ನುಡಿಯನ್ನು ಬರೆವುದೆಂದರೆ ಹಗಲಿನ ಮುಂದೆ ಬತ್ತಿ ಹಿಡಿವಂತೆ. ಆದರೂ ರಥಸಪ್ತಮಿಯ ಮುಂಬಗಲಲ್ಲಿ ಬತ್ತಿ ಹಚ್ಚಿದ ಹಾಳೆಗಳನ್ನು ತೇಲಬಿಡರೇ? ಅದು ಅಂದಿನ ಆಚಾರ, ಇದು ಇಂದಿನ ಆಚಾರ.

ಕನ್ನಡ ಸಾಹಿತ್ಯದಲ್ಲಿ ಸಾಲಿಯವರೆಂದರೆ ಕವಲುದಾರಿಗಳ ಕೈಕಂಬದಂತೆ; ಅವರ ಲೇಖನಿ ಹಳದಾರಿಗೂ ಚಾಚಿದೆ, ಹೊಸದಾರಿಗೂ ಚಾಚಿದೆ. ಅವರ ಕಾವ್ಯದೇವಿ ಇಂದಿನ ಕನ್ನಡಕ್ಕೆ ಒಪ್ಪುವಂತೆ ಪ್ರಾಯದಲ್ಲಿ ಹೊಸಬಳೇ ಆದರೂ ಶೀವಿಯಲ್ಲಿ ಒಂದು ಬಣ್ಣಕ್ಕೆ ಹಳಬಳು. ಅವಳಿಗೆ ಹಳೆಯ ಛಂದಸ್ಸುಗಳ ಉಡಿಗೆಯಲ್ಲಿ ಮೆಚ್ಚು, ಪ್ರಾಸದ ತೊಡಿಗೆಯಲ್ಲಿ ನೆಚ್ಚು. ಹಲವು ವರ್ಷಗಳಿಂದ ಹೆಚ್ಚಾಗಿ ಅವರ ವಾರ್ಧಕ ಷಟ್ಪದಿಗಳನ್ನೇ ಕಂಡ ನಾನು ಶ್ರೀ ವೆಂಕಟಪ್ಪನವರ ಚಿತ್ರವ್ಯಕ್ತಿಗೆ ವೀಣೆಯ ಹುಚ್ಚು ಶ್ರೀ ಸಾಲಿಯವರಿಗೆ ವಾರ್ಧಕದ ಹುಚ್ಚು ಎಂದುಕೊಂಡಿದ್ದೆ. ಸರ್ವಥಾ ಅಸಡ್ಡೆಯಿಂದಲ್ಲ; ಯಾವೊಂದೇ ಮಂತ್ರವನ್ನು ಸಾಧಿಸುತ್ತಿರುವ ಹಠಯೋಗಿಯಂತೆ ಅದೊಂದೇ ಛಂದಸ್ಸಿನಲ್ಲಿ ಕವನಿಸುತ್ತಿರುವ ಇವರಿಗೆ ಆ ಷಟ್ಪದಿಯಲ್ಲಿರುವ ಕಟ್ಟೆರಕವನ್ನು ಕಂಡು ನನಗಾದ ವಿಸ್ಮಯದಿಂದ. ವಾರ್ಧಕವೇನೂ ಎಡತರದ ಛಂದಸ್ಸಲ್ಲ. ಅದರ ಹೆಸರು ಮುಪ್ಪಾದರೂ ನಡಿಗೆಯಲ್ಲಿ ಮುಪ್ಪಿಲ್ಲ. ಅದೊಂದು ಜಾತ್ಯಶ್ವದಂತಿದೆ, ಅದರಲ್ಲಿ ಅಶ್ವಧಾರೆಯ ವೈವಿಧ್ಯವಿದೆ. ಕನ್ನಡ ಸಾಹಿತ್ಯದಲ್ಲಿ ಅದನ್ನು ಬಳಸಿದವರು ಹಲವರಾದರೂ ಅದನ್ನು ಅಂಕೆಯಲ್ಲಿರಿಸಿ ಸಮಯೋಚಿತವಾದ ಗತಿಗಳಿಂದ ನಡಸಿದ ಅಶ್ವವಾರರು ಕೆಲವರೇ. ಆ ರಾಹುತರ ವೈಹಾಳಿಯ ಚಾತುರ್ಯವು ಸಾಲಿಯವರ ವಾರ್ಧಕಗಳಲ್ಲಿಯೂ ಇದೆ; ಅಂಥವನ್ನೂ ಹೀಗಳೆವೆನೆ?

ಈ ಚಿತ್ರಸೃಷ್ಟಿಯ ಮೊದಲಿನ ತೆರೆಯ ಕವಿತೆಗಳಲ್ಲಿ ಅಲ್ಲಲ್ಲಿ ನಾನು–ನಾನು ಎಂದರೂ ಕವಿ ಒಬ್ಬಂಟಿಗನಾಗಿಲ್ಲ, ತನ್ನ ಒಡಹುಟ್ಟನ ಕನ್ನಡಿಗ

ರೊಂದಿಗೆ ತಾಯ ಮಡಲಲ್ಲಿ ಮುಂಡಿಸಿರುತ್ತಾನೆ; ಆ ಮೇಳವದಲ್ಲಿ ನಲಿಯುತ್ತಾನೆ, ತನ್ನ ಮಾತೃಭಕ್ತಿಯನ್ನು ಸೂರೆಬಿಡುತ್ತಾನೆ. ಈ ಮಾತೃಗೀತಗಳಲ್ಲಿ ಈ ಮುಂಚೆ ದೇಶಾಭಿಮಾನ ಎಂದೂ ಈಗ ಹಂಬಲು ಎಂದೂ ಹೆಸರಿಸಿರುವ ಆ ಉತ್ತಮವೂ ಪ್ರಖ್ಯಾತವೂ ಆದ ಕವಿತೆಯಿಂದ ನಮ್ಮ ತುಳುನಾಡಿನ ಸಾಲೆಯ ಮಕ್ಕಳೂ ಸಾಲಿಯವರ ಹೆಸರನ್ನು ಬಲ್ಲರು. ತಮ್ಮ ಹುಟ್ಟು ನಾಡಾದ ಕನ್ನಡವನ್ನು ಇವರು ಹೊಗಳಿರುವುದು ಸಹಜವೇ, ಆ ಕವಿತೆಗಳೂ ನೈಸರ್ಗಿಕವಾದ ಪ್ರೇಮದಿಂದ ತುಂಬಿ ತುಳುಕಾಡುತ್ತವೆ. ಆ ಮುಂದೆಯೇ ಭಾರತವನ್ನು ಬಿಟ್ಟು ಕರ್ಣಾಟಕವಿಲ್ಲ ಎಂಬ ಸತ್ಯಕ್ಕೆ ಬೆನ್ನಿಕ್ಕದೆ, ಕರ್ಣಾಟಕವೇ ಎಲ್ಲವಲ್ಲಿ ಎಲ್ಲವೆಂಬ ಆ ನೂತನ ಭ್ರಮೆಗೂ ಈಡಾಗದೆ, ಕನ್ನಡಿಗರು ಭಾರತಪುತ್ರರೆಂದು ಇವರು ಎಚ್ಚರಿಸಿರುವ ಕವಿತೆಗಳು ಸಂಗತವೂ ಆಗಿವೆ, ಸುಂದರವೂ ಆಗಿವೆ.

ಆ ಮೇಲಣ ನಿಸರ್ಗದ ನೆರೆಯಲ್ಲಿಯ ಕವಿತೆಗಳಲ್ಲಿ ಕವಿ ತನ್ನ ಒಡನಾಟದಲ್ಲೇ ತಾನಿರುತ್ತಾನೆ; ಆ ಒಂಟಿಯಲ್ಲಿ ಸಹಜವಾಗಿ ಒಳವೊಗವಾಗುತ್ತಾನೆ; ಬಾಹ್ಯ ಸೃಷ್ಟಿಯನ್ನು ತನ್ನ ಭಾವದೃಷ್ಟಿಯಿಂದ ನೋಡುತ್ತಾನೆ; ಹಾಗೆ ನೂತನ ಸ್ವರ್ಗವಾದ ಆ ಚಿತ್ರಸೃಷ್ಟಿಯಲ್ಲಿ ಸಹಸಾ ಒಗ್ಗೂಡುತ್ತಾನೆ; ಆ ಭಾವಸ್ವರ್ಗದಲ್ಲಿ ಸಮಾಧಿಯನ್ನು ಹೊಕ್ಕ ಯೋಗಿಯಂತೆ ಆನಂದವೇ ಆನಂದವನ್ನು ಅನುಭವಿಸುತ್ತಾನೆ—

ಮನದೊಳೊದವಿದುದು ಮೃದುಮಧುರಭಾವನೆಯೆನ್ನ
ಮನಮೆ ಈ ಬಾಹ್ಯ ಸೃಷ್ಟಿಯ ರೂಪೊ? ಸೃಷ್ಟಿಯೇ
ಮನದ ರೂಪೋ? ಮನದೊಳಿರ್ಪುದಂ ಸೃಷ್ಟಿಯೊಳ್ ಕಂಡಪೆಂ
ಚಿತ್ರಮೆನಿತೊ!
ಮನಮಳಿದುದೋ ಸೃಷ್ಟಿಯಳಿದುದೋ ಮೇಣ್ ತಿಳಿಯೆ
ನೆನಗೀಗಳೆತ್ತಲುಂ ತೋರ್ಪುದೊಂದೇ ಒಂದು!
ಮನಮಿಲ್ಲ ಸೃಷ್ಟಿಯಿಲ್ಲಾನಂದಮಾನಂದಮಾನಂದಮೊಂದೆ ಒಂದು!

ಈ ತೆರೆಯ ಕವಿತೆಗಳಲ್ಲಿ ಆ ಆನಂದದ ಲೋಲಾಟವಿದೆ.

ಮೂರನೆಯ ಅಲ್ಲಿ ಇಲ್ಲಿ ಎಂಬ ತೆರೆಯಲ್ಲಿ ಕವಿ ಮನವಾರೆ ತೊಳಲು

ತ್ತಾನೆ, ತನ್ನ ಮನೋಭೂಮಿಯಲ್ಲಿ ಅಲೆದಾಡುತ್ತಾನೆ. ಎಲ್ಲಿ ಮನೆಮಾಡ ಲೆಂದೊ? ಅಲ್ಲಲ್ಲ, ಏಕೆಂದರೆ ಸದಾಸಂಚಾರಿಯಾದ ಕವಿಗೆ—

The poet is a nomad evermore,

ಎಲ್ಲಿ ತಾನೆ ಮನೆ? ಪ್ರಾಯಶಃ ಎಲ್ಲೆಲ್ಲಿ ಸೊಬಗನ್ನು ಕಾಣಲಿ? ಯಾವಾವ ಸೊಬಗಿನಲ್ಲಿ ತಂಗಲಿ ? ಎಂದೇ ಚೆಲುವನ್ನು ಕಂಡಲ್ಲಿ ತಂಗಿರು ತ್ತಾನೆ, ತಂಗಿರುವಲ್ಲಿ ನುಡಿಗಳ ಗುಡಿಗಳನ್ನು ಕಟ್ಟಿರುತ್ತಾನೆ. ಅವೇ ಈ ತೆರೆಯಲ್ಲಿಯ ಕವಿತೆಗಳು. ಈ ಸೋಸಾಟದಲ್ಲಿ ಸಾವು ಸುಳ್ಳು ಸುಳ್ಳೆಂದೂ

ಅರಿವು ಕಿಡುವುದು ಮೊದಲು,
ಮರಣವಪ್ಪುದು ಬಳಿಕ !

ಎಂದೂ ಕವಿ ಅರಿಯುತ್ತಾನೆ, ಕೆಲವರಿಗೆ ಸುವರ್ಣದ ಚೌಕಟ್ಟಿನಲ್ಲಿ ಇರಿ ಸಿದ ಸಾಮಾನ್ಯ ಚಿತ್ರವಷ್ಟೇ ಎನಿಸುವ ನಮ್ಮ ಮುದ್ದಣನೇ ಇಂದಿನ ಕನ್ನಡವನ್ನು ಸುಗ್ಗಿಸಿದ ಕಳರುತಿಯ ಕೋಗಿಲೆ ಎಂಬ ಆ ಎರಡಿಲ್ಲದ ಸತ್ಯ ವನ್ನೂ ಅರುಹುತ್ತಾನೆ.

ನಾಲ್ಕನೆಯ ತೆರೆಯಲ್ಲಿಯ ಅಭಿಸಾರವು ಶ್ರೀ ರವೀಂದ್ರನಾಥ ಠಾಕೂರರ ಅದೇ ಹೆಸರಿನ ಬಂಗಾಳಿ ಕವಿತೆಯ ಅನುವಾದ. ಆ ವಂಗ ಮೂಲವು ವಿಷಮ ಛಂದಸ್ಸಿನಲ್ಲಿ ರಚಿಸಲ್ಪಟ್ಟು ಹಾವಿನ ಹೆಜ್ಜೆಯಿಂದ ನೀಳವಾಗಿ ಹರಿದಾಡುತ್ತದೆ. ಸಾಲಿಯವರೇಕೋ ಅದನ್ನೊಲ್ಲದೆ ಅಥವಾ ಅಂತಹ ಛಂದಸ್ಸನ್ನು ಕೈಯ್ಗಾರಿಸದೆ, ಆ ಕವಿತೆಯನ್ನು ಹ್ರಸ್ವ ಪದ್ಯಗಳಲ್ಲಿ ಕನ್ನಡಿಸಿರುವುದರಿಂದ, ಇವರ ಅನುವಾದವನ್ನು ಓದುವಲ್ಲಿ ರುಚಿಗೇನೂ ಕೊರತೆ ಇಲ್ಲವಾದರೂ ಕಾಯಿಯನ್ನು ಬಾಯಿಗೆತ್ತಿ ಕುಡಿವ ಎಳನೀರನ್ನು ಬಗಸೆಯಿಂದ ಸೇದುವಂತಾಗುತ್ತದೆ.

ಕೊನೆಯ ತೆರೆಯಲ್ಲಿ ತಿಲಾಂಜಲಿ ಎಂಬ ಅಶ್ರುಗೀತವಿದೆ. ಇಂದಿನ ಕನ್ನಡ ಸಾಹಿತ್ಯದಲ್ಲಿ ಪ್ರಾಯಶಃ ಇದೇ ಮೊತ್ತಮೊದಲಿನ ಕಂಬನಿಯ ಹಾಡೇನೋ. ಈ ಕವಿತೆಯ ಹ್ರಸ್ವ ಪದ್ಯಗಳಾದರೊ ಇದಕ್ಕೆ ಅನುರೂಪ ವಾಗಿವೆ; ತುಂಬಿದ ರೆಪ್ಪೆಯಿಂದ ತೊಟ್ಟಿಕ್ಕುವ ಕಂಬನಿಗಳಂತಿವೆ. ಇದರಲ್ಲಿ ಕೈಯ್ಹಿಡಿದು ತಂದು ಮನೆಮಾಡಿದ ಇನಿಯಳನ್ನು ಕಳಕೊಂಡ ಇನಿಯನ

ಶೋಕವನ್ನು ತನಗಿದ್ದ ಯಾವ ಅದೊಬ್ಬನೆ ಮಗನ ಮೊಗನೋಡಿ ತಡ ಕೊಳ್ಳಲಾಯಿತೊ ಆ ಮಗನನ್ನೂ ಕಳಕೊಂಡು 'ಅಳಲೆ ತಾನಾಗಿರುವ' ತಂದೆಯ ಅಂತಃಕರಣದ ನಕ್ಷತ್ರಹೀನವಾದ ನಿಶೀಥವೂ ಇದೆ, ಅದರ ಬೇಗೆಯ ಬೇಗುದಿಯೂ ಇದೆ. ಇಂಥಾ ನಿಶೀಥದಿಂದ ಯಾರು ನೊಂದಿಲ್ಲ? ಇಂಥಾ ಬೇಗುದಿಯಿಂದ ಯಾರು ಬೆಂದಿಲ್ಲ? ಎನ್ನ ಬಹುದಾದರೂ, ತ್ಯಾಗದಿಂದೆನ್ನಿ—

ಗುಡಿಯ ಕಟ್ಟುವ ಶಿಲ್ಪಿ
ಕೊಡತಿಯೊಳು ಬಿಟ್ಟ ಕ
ಲ್ಲೊಡೆವುದನು ಕಂಡವನು
ಕಿಡುಕನೆಂದೆನಲಹುದೆ?

ಭಕ್ತಿಯಿಂದೆನ್ನಿ—

ಕರುಣಾಳು! ಕೈ ನೀಡು! ನೀನಲ್ಲದಿನ್ನಾರ
ನೆರವೆನಗೆ? ವಿಶ್ವಪತಿ, ನೀಂ ತಂದೆ, ನೀಂ ಮಗಂ
ನೀನೆನ್ನ ಸಕಲ ಬಂಧು!

ನಡೆವುದೈ ನೀನೆನ್ನ ಜತೆಯೊಳೆಡೆವಿಡದೆ ಕೆ
ಯ್ವಿಡಿದೆನ್ನು ಮಗನವೋಲೀ ಕವಿದ ಕಳ್ತಲೆಯ
ನಡುವೆ ನೀಂ ಬೆಳಕಾಗಿ!

ಹರಿ, ನೀನೆ ಮಗನಾಗಿ
ಕರುಣಿಪುದು! ಕರುಣಿಪುದು!

ಆ ನಿಶೀಥವಲ್ಲಿಯೂ ಸೊಂಪನ್ನೂ ಆ ಬೇಗುದಿಯಲ್ಲಿಯೂ ತಂಪನ್ನೂ ಕಾಂಬಾತನು ಕವಿಯಲ್ಲದೆ ಮತ್ತೊಬ್ಬನಲ್ಲದ ಕಾರಣ, ಈ ಕಣ್ಣೀರಿನ ಕವಿತೆ ನಮ್ಮ ಹೃದಯದಲ್ಲಿ ನೆಟ್ಟನೆ ಏಕರಸವಾಗುತ್ತದೆ, ಮಿಟ್ಟನೆ ಏಕ ತಾನವಾಗುತ್ತದೆ.

ಮನುಷ್ಯನು ಮನುಷ್ಯನೆಂಬ ಕಾರಣದಿಂದಲೆ ಆತನಿಗೆ ಮೆರತದ ಮರುಳೂ ಇದೆ, ಹೊಗಳಿಕೆಯ ಹುಚ್ಚೂ ಇದೆ. ಕವಿಯಾದ ಮಾತ್ರಕ್ಕೆ ಇದೇನೂ ಬಿಟ್ಟು ಹೋಗಬೇಕೆಂದಿಲ್ಲ; ಪ್ರಾಯಶಃ ಹೆಚ್ಚಲೂ ಬಹುದು. ಆದರೆ ಆತನು ಕಾವ್ಯಸಮಾಧಿಯಲ್ಲಿ ಆಳಆಳಕ್ಕೆ ಹೋಗುತ್ತಿರುವಂತೆ, ಉದ್ದ ಉದ್ದಕ್ಕೆ ನೆಲಸುತ್ತಿರುವಂತೆ,

There is a delight in singing, tho' none hear
Beside the singer:

ಎಂಬ ಅದುವರೆಗೆ ಪ್ರಾಯಶಃ ಆತನು ಅರಿತಿಲ್ಲದ ಸತ್ಯವು ಆತನಿಗೆ ಹೊಳೆಯದಿರದು. ಅಂಥವನು ಓದುಗರನ್ನು ಬೇಡಿ ಕೆಯ್ಯೊಡ್ಡನು, ಕೀರ್ತಿಯನ್ನು ಬೇಡಿ ಮೆಯ್ಯೊಡ್ಡನು. ನಿರಾಶೆಯಿಂದಲೂ ಅಲ್ಲ, ತಿರಸ್ಕಾರ ದಿಂದಲೂ ಅಲ್ಲ; ಆತ್ಮಾರ್ಪಣದಿಂದ ತನಗುಂಟಾದ ಸಂತುಷ್ಟಿಯಿಂದ, ಆತ್ಮಸಹವಾಸದಲ್ಲಿ ತನಗುಂಟಾಗುವ ಆನಂದದಿಂದ. ಆತನು ರಚಿಸುವ ಕವಿತೆಗಳು, ಕುಡಿಯುವವರು ಕುಡಿಯಲಿ ಕುಡಿಯದವರು ನಡೆಯಲಿ ಆ ಗೊಡವೆ ತನಗಿಲ್ಲದ ಊಟೆಯ ನೀರಿನಂತೆ ಹರಿವವೇ ಹೊರತು ಅರವಟ್ಟಿಗೆಯ ನೀರಿನಂತೆ ಹೋಗಬರುವವರಿಗೆ ಕಾದು ನಿಲ್ಲವು. ಆದರೆ ಊಟೆಗಳೆಷ್ಟು ? ಅರವಟ್ಟಿಗೆಗಳೆಷ್ಟು ?

ನನಗೆ ಸಾಲಿಯವರ ಪರಿಚಯು ಬಹಳ ಕಡಮೆ. ಇದುವರೆಗೆ ಅವರನ್ನು ನಾನು ಕಂಡುದು ಮೂರೇ ಬಾರಿ. ಮೊತ್ತಮೊದಲಲ್ಲಿ ೧೯೨೯ನೆಯ ಮೇ ತಿಂಗಳಲ್ಲಿ ಬೆಳಗಾವಿಯಲ್ಲಿ ನೆರೆದ ಸಾಹಿತ್ಯ ಸಮ್ಮೇಲನದ ಸಂದರ್ಭದಲ್ಲಿ. ಆಗ್ಗೆ ನಮ್ಮೊಳಗೆ ಒಂದೆರಡಾದರೂ ಮಾತುಗಳು ಅತ್ತಿತ್ತ ಆಗಿವೆಯೊ ನನಗೆ ನೆನಪಿಲ್ಲ. ಎರಡನೆಯ ಸಲ ೧೯೩೦ನೆಯ ಸಪ್ತಂಬರದ ಆ ಮೂರುಸಂಜೆಯ ಜಡಿಮಳೆಯಲ್ಲಿ ನಾನು ಸಾಧನಕೇರಿಯಿಂದ ಮರಳುತ್ತಿದ್ದ ದಾರಿಯಲ್ಲಿ. ಆಗ್ಗೆ ಎದು ರ್ಗೊಂಡ ಹೊತ್ತಿಗೆ ಒಂದೆರಡೇನೋ ಮಾತುಗಳನ್ನು ಆಡಿದ್ದೇವೆ. ಮೂರನೆಯ ಸಾರಿ ಇದೇ (೧೯೪೦) ಮಾರ್ಚ ತಿಂಗಳಲ್ಲಿ ನಾನು ಧಾರವಾಡಕ್ಕೆ ಹೋಗಿದ್ದಾಗ ಅವರಲ್ಲಿಗೆ ಕಾಣಹೋದಲ್ಲಿ. ಆಗ್ಗೆ ನಮ್ಮೊಳಗೆ ಒಂದೆರಡು ತಾಸು ಮಾತುಕಥೆಯಾಗಿದೆ. ಆ ಕೆಲವೇ ಗಳಿಗೆ ಗಳಲ್ಲಾದರೂ ನನಗಾದರೊ ಇತರ ತ್ವಕಾರಗಳು ಸಮನಿಸಿರುವವರಲ್ಲಿ ಆದ್ಯ ತ್ವಕಾರವಾದ ಮನುಷ್ಯತ್ವವು ಬಹುಳವಾಗಿ ಲೋಪಿಸುತ್ತದಾದರೆ. ಸಾಲಿ ಯವರಲ್ಲಿ ಹಾಗಲ್ಲ, ಕವಿತ್ವವು ಸಂಗಡಿಸಿರುವಲ್ಲಿ ಮನುಷ್ಯತ್ವವು ಮತ್ತೂ ವೃದ್ಧಿಯಾಗಿರುವಂತೆ ತೋಚಿತು. ನನ್ನ ಮನಗನ್ನಡಿಯಲ್ಲಿ ನೆಲಸಿರುವ ಅವರ ಛಾಯಾಚಿತ್ರವು ಶೆಲ್ಲಿಯ (Shelley) ಭಾವಲಕ್ಷ್ಮೀಸ್ತವದ

(Hymn to Intellectual Beauty) ಈ ಕೊನೆಯ ಬಂತಿಗಳನ್ನು ಪದೇ ಪದೇ ನೆನವರಿಸುತ್ತದೆ—

One who worships thee,

And every form containing thee,
Whom, Spirit Fair, thy spells did bind
To fear himself, and love all human kind.

ಮಂಜೇಶ್ವರ
ವಿಕ್ರಮ ಸಂ. ಮಾರ್ಗಶಿರ ಶು. ೨
೧ ದಶಂಬರ ೧೯೪೦

**ಗೋವಿಂದ ಪೈ**

# ಪರಿವಿಡಿ

# ಪರಿಚಯ

"In art there is not only the idea of beauty, but also of truth; both are inseparably mixed together. If art tries to give expression only to the idea of beauty it cannot stand the test of ages. It must stand with truth. Truth and beauty cannot be separated, both are woven together to produce art."

— Prof. **Phanindra Bose**

## ೧ ಮಾಟದ ಮಣೆ

ಪಾಂಡ್ಯ ಅರಸರ ನಾಮಾಂಕಿತ ರಾಜಧಾನಿಯಾದ ಮದುರೆಯಲ್ಲಿ ಸರಸತಿಯ ಸಕಲಾವಯವಗಳೇ ಮೂರ್ತೀಭವಿಸಿ ಮನುಜರೂಪ ಧರಿಸಿ ದಂತಿರುವ ನಾಲ್ವತ್ತೊಂಬತ್ತು ಮಹಾಕವಿಗಳದೊಂದು ಸಾಹಿತ್ಯಸಮಿತಿ ಏರ್ಪಟ್ಟಿದ್ದಿತು ಇವರ ಬುದ್ಧಿವಂತಿಕೆಗೆ ಮೆಚ್ಚಿದವನಾದ ಶಿವನು ಎರಡು ಗೇಣು ಚದುರಿನ ಒಂದು ಮಾಟದ ಮಣೆಯನ್ನು ದಯಪಾಲಿಸಿದನು. ಪಾತ್ರತೆಯಿಂದ ಈ ಪ್ರಪಂಚದಲ್ಲಿ ನಿಲ್ಲಲು ಅರ್ಹವಾದ ಒಡವೆ ಮಾತ್ರ ಈ ಮಣೆಯಮೇಲೆ ನಿಲ್ಲುವಂತಹದಾಗಿತ್ತು. ಈ ಮಣೆಯ ಮೇಲೆ ನಿರಾತಂಕವಾಗಿ ಕುಳಿತುಕೊಂಡು ಈ ಸಾಹಿತ್ಯಸಮಿತಿಯ ನಾಲ್ವ-ತ್ತೊಂಬತ್ತು ಕವಿಸದಸ್ಯರು ನವ ನವ ಕವಿಗಳ ನೂತನ ಕೃತಿಗಳನ್ನು ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸುತಿದ್ದರು. ಇದು ಕೀಳು, ಇದು ಮೇಲು ಎಂದು ತೀರ್ಮಾನಿಸುತಿದ್ದರು. ಈ ಸಾಹಿತ್ಯಸಂಘದ ಪ್ರಶಸ್ತಿಯಿಲ್ಲದೆ ಯಾವೊಂದು ನವ್ಯ ಕೃತಿಯೂ ಮಾನ್ಯತೆಯನ್ನು ಪಡೆಯುತಿರಲಿಲ್ಲ.

ಇಂತು ಇರುತಿರಲು ಒಮ್ಮೆ ಒಂದು ವಿಚಿತ್ರ ಘಟನೆ ಸಂಭವಿಸಿತು. ನೇಕಾರ ಜಾತಿಯ ವಳ್ಳುವರ್ ಎಂಬ ಲೋಕಾನುಭವಿ ವ್ಯುತ್ಪನ್ನ ಕವಿ-

ಯೊಬ್ಬನು ರಚಿಸಿದ ಕುರಳ್ ಎಂಬ ಕಾವ್ಯವು ಪರೀಕ್ಷೆಗಾಗಿ ಈ ಸಾಹಿತ್ಯ ಸಂಘದ ಮುಂದೆ ಬಂದಿತು. ಸಂಘದ ಆ ನಾಲ್ವತ್ತೊಂಬತ್ತು ಸದಸ್ಯರಲ್ಲಿ ಪ್ರತಿಯೊಬ್ಬನು ಈ ನವೀನ ಕೃತಿಯನ್ನು ಅಲ್ಲಗಳೆದನು; ಹೀನವಾಗಿದೆ ಎಂದು ಟೀಕಿಸಿದನು; ಸಂಘದ ಪ್ರಶಸ್ತಿಗೆ ಅನರ್ಹವೆಂದು ತೀರ್ಮಾನಿಸಿದನು.

ಹೀಗಾದುದನ್ನು ನೋಡಿ ಆ ಕೃತಿಯ ಪುರಸ್ಕಾರಿಗಳು ಈ ವಿಷಯವನ್ನು ಅಷ್ಟಕ್ಕೆ ಬಿಟ್ಟು ಬಿಡಲಿಲ್ಲ. ಸಂಘದ ಈ ನಿರ್ಣಯವು ಅನ್ಯಾಯ್ಯವಾಗಿದೆಯಲ್ಲದೆ ಆ ಸತ್-ಕೃತಿ-ರತ್ನವನ್ನು ಅವಮಾನಿಸುವಂತಹದು ಆಗಿದೆ ಎಂದೂ, ಆದುದರಿಂದ ಆ ಮಾಟದ ಮಣೆಯ ಮೇಲೆ ಇರಿಸಿ ಅದನ್ನು ಇನ್ನೊಮ್ಮೆ ಸರಿಯಾಗಿ ಪರಿಕಿಸಬೇಕೆಂದೂ ಅವರು ಹಠ ಹಿಡಿದರು. ಈ ಪ್ರಾರ್ಥನೆ ಸ್ವೀಕೃತವಾಯಿತು. ಅವರು ಸೂಚಿಸಿದಂತೆ ಕುರಳ್ ಗ್ರಂಥದ ಪರೀಕ್ಷೆ ನಡೆಯಿತು. ಗ್ರಂಥವನ್ನು ಮಣೆಯ ಮೇಲೆ ಇರಿಸಿದರು. ಅದರ ಪರೀಕ್ಷಕರು ಎಂದಿನಂತೆ ಆ ಮಣೆಯ ಮೇಲೆ ಕುಳಿತರು. ಆದರೆ ಅದೇನಚ್ಚರಿಯೊ! ಆ ಹೊತ್ತಿಗೆಯನ್ನು ಇರಿಸಿದ ಎಡೆಯನ್ನು ಉಳಿದು ಆ ಮಣೆಯ ಮಿಕ್ಕ ಭಾಗವೆಲ್ಲವು ತಲೆಕೆಳಗಾಯಿತು. ಆ ನಾಲ್ವತ್ತೊಂಬತ್ತು ಪರೀಕ್ಷಕ ಮಹಾಶಯರು ಮಣೆಯಿಂದ ಜಾರಿ ಬಿದ್ದು ನೀರಲ್ಲಿ ಮುಳುಗಾಡಿದರು.

ಆನಂತರ ಆ ಸದಸ್ಯರೆಲ್ಲರ ಕಣ್ಣುಗಳು ತೆರೆದುವು. ತಾವು ಮೊದಲು ಹೇಳಿದ ತೀರ್ಮಾನವು ತಪ್ಪಿನದೆಂದು ಅವರು ಒಪ್ಪಿಕೊಂಡರು. ಇದು ಅತ್ಯುತ್ತಮ ಕೃತಿಯೆಂದು ಒಬ್ಬೊಬ್ಬ ಸದಸ್ಯನೂ ಒಂದೊಂದು ಹಾಡುಕಟ್ಟಿ ಹೊಗಳಿದನು.

'ಶಂಗಂ ಯುಗ'ದ ತಮಿಳು ಸಾಹಿತ್ಯದಲ್ಲಿ ಹೇಳುವ ಈ ಕತೆ ಬಹಳ ಹಳದಾಗಿದ್ದರೂ ಎಂದಿಗೂ ಹೊಸತಾಗಿದೆ. ಏಕೆಂದರೆ ಅದು ಚಿರಂತನವಾದ ಒಂದು ಸತ್ಯವನ್ನು ಒಳಕೊಂಡಿದೆ. ಭಾವನಾಗಮ್ಯವಾಗಿ ಸೂಕ್ಷ್ಮಬುದ್ಧಿಗೆ ಮಾತ್ರ ಗೋಚರವಾದ ಸಾಹಿತ್ಯಸಮೀಕ್ಷೆ, ಅದರಲ್ಲಿಯೂ ಸಮ

ಸಾಮಯಿಕವಾದ ಸಾಹಿತ್ಯ ಸಮೀಕ್ಷೆ ( estimate of contemporary literature) ಸುಲಭವಲ್ಲ. ಎಂತಹ ಜ್ಞಾನಿಯಾದರೂ ವಿಕಾರವಶನಾದ ಮಾನವನ ಮತಿ ಮಲರಹಿತವಾಗಲರಿಯದು. ಒಬ್ಬನಿಗೆ ಸಿಹಿಯಾದುದು ಇನ್ನೊಬ್ಬನಿಗೆ ಕಹಿಯೆನಿಸಬಹುದು. ಇಂದು ವಿರಸವಾದುದು ನಾಳೆ ಸರಸವಾಗಬಹುದು.

ಇಂತಹ ಅನುಭವಗಳು ಎಲ್ಲ ಸಾಹಿತ್ಯದಲ್ಲಿಯೂ ಬಂದುದುಂಟು. ಈ ಸಂದರ್ಭದಲ್ಲಿ ಆಂಗ್ಲ ಸಾಹಿತ್ಯದ ಒಂದು ಅನುಭವವು ಅತ್ಯಂತ ಲಕ್ಷಣೀಯವಾಗಿದೆ. ವಿಶ್ವಸಾಹಿತ್ಯಚಕ್ರವರ್ತಿಯೆನಿಸಿದ ಶೆಕ್ಸಪಿಯರನ ನಾಟ್ಯ ಪ್ರತಿಭೆಯೂ ಕಾವ್ಯಪ್ರೌಢಿಮೆಯೂ ಇದೀಗ ಸಕಲವಿಬುಧಮಾನ್ಯ ವಾಗಿವೆ. ಆದರೆ ಆತನ ಸಮಕಾಲಿಕರನೇಕರು ಅವುಗಳನ್ನು ಪರಿಪರಿ ಯಾಗಿ ದೂಷಿಸಿದರು. ಸುಪ್ರಸಿದ್ಧ ಫ್ರೆಂಚ ಸಾಹಿತಿ ವಾಲ್ಟೇರನು ಆತನ ವಿಷಾದಾಂತ ನಾಟಕಗಳೆಂಬುವು ಅಸಹ್ಯವಾದ ಪೈಶಾಚಿಕ ಹುಚ್ಚಾಟ ಗಳೆಂದೂ, ಕಾವ್ಯವೆಂಬುದು ಅನಾಗರಿಕನ ನಿರರ್ಗಳ ಪ್ರಳಾಪವೆಂದೂ ಉಸುರಿದನು.

> " Voltaire calls Shakespeare a writer of monstrous farces called tragedies. His poetry is the fruit of imagination of an intoxicated savage "

ಆದುದರಿಂದ ಸಹೃದಯತೆಗೆ ಸಂಚಕಾರ ಕೊಟ್ಟ ತರಲ ಮೇಧಾವಿತೆ ಯಾಗಲಿ, ತೂಕವಿಲ್ಲದ ಕೇವಲ ತಾರ್ಕಿಕತೆಯಾಗಲಿ, ಸಾಹಿತ್ಯಸಮೀಕ್ಷೆಯ ಸಮರ್ಪಕ ಮಾನದಂಡವಾಗಲಾರವು ಎಂದು ವಿಚಾರಿಗಳು ಭಾವಿಸುವರು. ಈ ವಿಧವಾದ ಭಾವವನ್ನೇ ಇಂದಿನ ಕನ್ನಡ ಕವಿಯೊಬ್ಬನು ಇಂತು ಸೂಚಿಸಿದಾನೆ.

> ಹಿಸುಕದಿರು ವನಸುಮವ; ಕವಿಯ ಹೃದ್ವನಸುಮವ;
> ಹಿಸುಕಿ ಪಾಳ್ಗೆಯ್ಯದಿರು ಸುಮದ ಸುರಭಿಯ, ಚೆಲುವ.
> ..................... ....... ......................

ಆ ಸುಮುವ ಕೀಳ್ದು ದಳಗಳ ಹಿಸುಕೆ, ಆ ನೋಟಿ
ಚಲುವಹುದೆ ?... ..............................
ಏನೆಂಬೆ ? ನಣ್ಣಿಯುರಸುವೆನೆಂದೊ ? ಆ ಕೇಳಿ
ಬರಿಪುರ್ಜು ! ಸೊಬಗೆ ನಣ್ಣಿಯದಲ್ತೆ ? ಸೊಬಗ ಕೊಲೆ-
ಯಿಂ ನಣ್ಣಿಯರಿವಹುದೆ ? ಬರಿ ಭ್ರಾಂತಿಯದು ಗೆಳೆಯ !
.... .... .... .... ... ಆ ಉಕ್ತಿ-
ಯನ್ನುಳಿದು, ಕವಿಹೃದಯಮಂ ಪೊಕ್ಕು, ಅವನ ಕಲೆ-
ಯಾನಂದಮುವನೊಡನೆ ಸವಿಯಲೀ ಧಾರುಣಿಯ
ಜನರೆಲ್ಲ ಸಾರ್ಥಕವು; ಕವಿಕರ್ಮಕದೆ ಮುಕ್ತಿ !

—ಟಿ. ಎನ್. ಶ್ರೀನಿವಾಸಮೂರ್ತಿ

## ೨ ಇಂದಿನ ಕನ್ನಡ ಸಾಹಿತ್ಯ

ಯುಗ ಯುಗಗಳು ಕಳೆದು ಕನ್ನಡ ಸಾಹಿತ್ಯದಲ್ಲಿ ಇದೀಗ ನವ-ಯುಗವು ಆರಂಭಿಸಿದೆ. (ಈ ನವಯುಗವೇ ಕಾಲಾಂತರದಲ್ಲಿ ಪುರಾಣ ಯುಗವೆನಿಸುವುದು ಎಂಬುದನ್ನು ಮರೆಯಲಾಗದು.) ಸಾಹಿತ್ಯಲೋಕ ದಲ್ಲಿಯೂ ಕಾವ್ಯಪ್ರಪಂಚದಲ್ಲಿಯೂ ವಿಧವಿಧದ ರಚನೆಗಳು ನಡೆಯುತಲಿವೆ. ಪಾತ್ರತೆ, ಪರಿಸ್ಥಿತಿ, ಸಂಸ್ಕಾರಗಳಿಗೆ ಅನುಗುಣವಾಗಿ ಬಗೆಬಗೆಯ ಸಾಹಿತ್ಯ ನಿರ್ಮಿತಿ ಆಗುತಲಿದೆ. ಅಭಿರುಚಿಯ ಅನುಸಾರವಾಗಿ ಅದಕ್ಕೆ ಪುರಸ್ಕಾರ ಪ್ರೋತ್ಸಾಹಗಳೂ ದೊರೆಯುತಲಿವೆ. ಹಳದನ್ನೇ ಹೊಗಳುವವರದು ಒಂದು ತಂಡವಾದರೆ, ಹೊಸತರಲ್ಲಿ ಹುರುಳಿದೆ ಎಂದು ಹೇಳುವವರದು ಇನ್ನೊಂದು ತಂಡ. ಗದ್ಯದ ಭಕ್ತರು ಒಂದು ಕಡೆ; ಪದ್ಯಪ್ರಿಯರು ಇನ್ನೊಂದೆಡೆ, ಕಥೆ ನಾಟಕಗಳನ್ನು ಕೊಂಡಾಡುವವರು ಕೆಲರು; ಈ ಕಾಗೆ ಗುಬ್ಬಿಯ ರಗಳೆಗಳಿಂದ ಪುರುಷಾರ್ಥವಾವುದು, ಎಂದು ಪ್ರೌಢ ಸಾಹಿತ್ಯಬೇಡುವವರು ಅನ್ಯರು. ವ್ಯಾಕರಣಛಂದಸ್ಸುಗಳ ಬಂಧನದಿಂದ ಬಿಡುಗಡೆಯಾಗದೆ ಉದ್ಧಾರವಿಲ್ಲ, ಎಂದು ಒಂದು ಗುಂಪು ವಾದಿಸಿದರೆ, ನುಡಿಯ ಜೀವಾಳವನ್ನು ಹಿಚುಕಿ ಭಾಷೆಯ ಸ್ವರೂಪವನ್ನು ಹಾಳು ಮಾಡುವುದು ಸುಧಾರಣೆಯೆ ಎಂದು ಮತ್ತೊಂದು ಗುಂಪು ಪ್ರತಿಪಾದಿಸು ವುದು. ಈ ಕಾಲದಲ್ಲಿ ಸಾಹಿತ್ಯ ನಿಷ್ಪತ್ತಿಗೂ ದುರ್ಭಿಕ್ಷವಿಲ್ಲ. ಎಲ್ಲೆಲ್ಲಿಯೂ

ಕವಿಗಳು, ಕತೆಗಾರರು, ಲೇಖಕರು ಮಿನುಗುತಿರುವರು, ಮಿಂಚುತಿರುವರು. ಇಂತು ಸಂಕುಲವಾದ ಈ ಸಂಕ್ರಮಣಯುಗದಲ್ಲಿ ಯಾವೊಂದು ಕವಿಯು, ಯಾವೊಂದು ಕೃತಿಯ ನೆಲೆಬೆಲೆಗಳನ್ನು ನಿರ್ಧರಿಸಿ ರಾದ್ಧಾಂತಿಸುವುದು ಕಠಿನಕಾರ್ಯ.

## ೩ ಶ್ರೀ. ಸಾಲಿಯವರ ಕವನಗಳು

ಶ್ರೀ. ಸಾಲಿ ರಾಮಚಂದ್ರರಾಯರು ಈಗ ಅನೇಕ ವರ್ಷಗಳಿಂದ ಕನ್ನಡದಲ್ಲಿ ಬರೆಯುತಲಿದಾರೆ; ತಮ್ಮದೇ ಆದ ಒಂದು ರೀತಿಯಲ್ಲಿ ಕವನಗಳನ್ನು ಕಟ್ಟುತಲಿದಾರೆ. ಅವರ ಕವಿತೆಗಳು ಅನೇಕ ಜನರ ಮೆಚ್ಚುಗೆಯನ್ನು ಪಡೆದಿವೆ. ಇಂದಿನ ಕನ್ನಡದಲ್ಲಿ ಒಬ್ಬ ಕವಿಯೆಂದು ಅವರು ಗಣ್ಯರಾಗಿದಾರೆ. ಒಳ್ಳೆ ಕವಿಯೆಂದು ಅವರಿಗೆ ಹೆಚ್ಚಿನ ಮನ್ನಣೆ ಮಾಡುವವರೂ ಇದಾರೆ. ಏನು ಕವಿತೆ; ಒರಟು ಭಾಷೆ, ಬಿರುಸು ರಚನೆ; ಎಂದು ಮೂಗು ಮುರಿಯುವವರ ಒಂದು ವರ್ಗವೂ ಇದೆ. ಯಾವನೊಬ್ಬ ಕವಿಯ ವಿಷಯದಲ್ಲಿ ಯಾವದೊಂದು ವಿಧವಾದ ಮತವನ್ನು ಮಾಡಿಕೊಳ್ಳುವ ಮೊದಲು ಆತನ ಕೃತಿಯನ್ನು ಸಮಗ್ರವಾಗಿ ಅವಲೋಕಿಸುವುದು ಉಚಿತ. ಆತನು ರಚಿಸಿದ ಕೆಲವಾರು ಕವನಗಳನ್ನಾಗಲಿ, ಹಲವಾರು ಪದ್ಯಗಳನ್ನಾಗಲಿ, ಅಲ್ಲೊಂದು, ಇಲ್ಲೊಂದು, ತುಣುಕು ಮಿಣುಕಾಗಿ ಓದಿಕೊಂಡು ಯಾವೊಂದು ಬಗೆಯ ಗ್ರಹಿಕೆಯನ್ನು ಕಲ್ಪಿಸಿಕೊಳ್ಳುವುದು ಯುಕ್ತವಲ್ಲ. ಕಾವ್ಯ-ವ್ಯಾಸಂಗಕ್ಕೆ ಎರಡು ಮಾತಿನ ಅಗತ್ಯವಿದೆ ಒಂದು ಕವಿಯ ಸಮಗ್ರ ಕೃತಿಗಳ ಸಾಮೂಹಿಕ ಪರಿಚಯ; ಎರಡು, ಬೇರೆ ಬೇರೆ ದೃಷ್ಟಿಯಿಂದ ಅವುಗಳ ಸ್ವರೂಪ ಪರಿಶೀಲನ.

## ೪ ಸಂಕಲನದ ಅಗತ್ಯ

ಶ್ರೀ. ಸಾಲಿಯವರ ಕಾವ್ಯವನ್ನು ಅಭ್ಯಾಸ ಮಾಡಲು ಬಯಸುವವರ ಮಾರ್ಗದಲ್ಲಿ ಇದೀಗ ಹೇಳಿದ ಎರಡು ಬಗೆಯಲ್ಲಿಯೂ ಆತಂಕಗಳು ಮುಂದೆ ಬಂದು ನಿಲ್ಲುವುವು. ಇನ್ನೂ ಅಪೂರ್ಣ ಸ್ಥಿತಿಯಲ್ಲಿರುವ

ಶ್ರೀರಾಮಚರಿತವೆಂಬ ಸುದೀರ್ಘ ಕಥಾಕಾವ್ಯವನ್ನುಳಿದು ಅವರ ಮಿಕ್ಕ ರಚನೆಯೆಲ್ಲವು ಪ್ರಾಯಿಕವಾಗಿ ಸ್ಫುಟ-ಕವನ–ಗೀತಗಳ ರೂಪವಾಗಿದೆ. ಅನೇಕ ವರ್ಷಗಳ ಆಚೆಯಿಂದ ಶ್ರೀಯುತರು ಬರೆದ ಕವಿತೆಗಳು ಅಲ್ಲಲ್ಲಿ, ಬೇರೆ ಬೇರೆ ಪತ್ರಿಕೆಗಳಲ್ಲಿ, ಬೇರೆ ಬೇರೆ ಕಾಲದಲ್ಲಿ ಪ್ರಕಟವಾಗಿವೆ. ಇಂತಹ ಕೆಲವು ಪತ್ರಿಕೆಗಳು ಈಗ ನಾಮಶೇಷವಾಗಿರುವುದರಿಂದ ಅವುಗಳಲ್ಲಿ ಕೆಲವನ್ನು ಕಂಡು ಹಿಡಿಯುವುದೂ ಕಷ್ಟವಾಗಿದೆ.

ಇಂದಿನ ಕನ್ನಡ ಸಾಹಿತ್ಯದ ಅಧ್ಯಯನಾಭಿರುಚಿ ಬೆಳೆಯುತಿರುವ ಈ ಕಾಲದಲ್ಲಿ ಶ್ರೀಯುತರ ಕಾವ್ಯವನ್ನು ಪರಿಶೀಲಿಸಲೆಳಸುವ ಹಲವರು ಅವರ ಕವನಗಳ ಸಂಗ್ರಹವೊಂದು ಪ್ರಕಟವಾಗಬೇಕೆಂದು ಅಪೇಕ್ಷಿಸುತ ಲಿದ್ದರು. ಈಗಣ ತಲೆಮಾರಿನ ಅನೇಕ ತರುಣರು ಶ್ರೀಯುತರು ಕವಿ ಯೆಂದು ತಿಳಿದು ಬಲ್ಲರು. ಹಲವರು ಈಚೀಚೆಗೆ ಪ್ರಕಟವಾಗಿರುವ ಅವರ ಕವನಗಳನ್ನು ಓದಿರುವರು, ಕೇಳಿರುವರು. ಆದರೆ ಅದರ ಆಚೆಗೆ ಹೋಗಿ ಈ ಯುವಕರು ಅರಿವಿನ ಬೆಳಕು ಕಾಣದ ಮುನ್ನವಾಗಲಿ, ಅಷ್ಟೇಕೆ ಆರೆಂಟು ವರ್ಷಗಳ ಹಿಂದೆಯಾಗಲಿ, ಬಿಡಿ ಬಿಡಿಯಾಗಿ ಪ್ರಕಟವಾದ ಶ್ರೀಯುತರ ಕವಿತೆಗಳ ವಿಚಾರವಾಗಿ ಸಮಗ್ರತೆಯಿಂದ ಅರಿಯುವುದು ದುಸ್ತರವಾಗಿದೆ. ಈ ಅವಸ್ಥೆಗೆ ಕೆಲಮಟ್ಟಿಗೆ ಸ್ವತಃ ಶ್ರೀ. ಸಾಲಿಯವರೇ ಕಾರಣವೆಂದು ಹೇಳಬಹುದು. ಶ್ರೀಯುತರು ಕೀರ್ತಿವಿಮುಖರಾದುದ ರಿಂದ ತಮ್ಮ ಕವನಗಳನ್ನೆಲ್ಲ ಒಂದೆಡೆಗೆ ಬರೆದು ಸೇರಿಸಿ ಇಟ್ಟಿರಲಿಲ್ಲ. * ಮಾತ್ರವಲ್ಲ, ಹೀಗೆ ಅವುಗಳನ್ನು ಸಂಗ್ರಹಿಸಲು ಪ್ರಯತ್ನಿಸಿದವರನ್ನು ಕುರಿತು ಅವರು ಹಲವು ಸಲ, "ಅದೇಕೆ ಬೇಕು; ನನ್ನ ಸಂತೋಷಕ್ಕೆ ನಾನು ಬರೆದೆನು, ಹಾಡಿದೆನು; ಆಯಿತು, ಅಷ್ಟಕ್ಕೆ ಕೆಲಸ ಮುಗಿಯಿತು; ಕವಿ ಕವಿ ಎಂದು ನನ್ನನ್ನು ಕರೆವುದೇಕೆ, ಮತ್ತೆ ಮತ್ತೆ ನೆನೆವು ಬೇಕೆ; ನನ್ನನ್ನು ನೆನೆಯದಿರಿ, ಮರೆತುಬಿಡಿ;" ಎಂದು ನುಡಿದು ನಿರುತ್ಸಾಹ ಗೊಳಿಸಿ ಕಾರ್ಯನಿವೃತ್ತರನ್ನು ಮಾಡಿದುದುಂಟು.

---

* ಹಲವು ಕವನಗಳು ಕೆಲವು ವರ್ಷಗಳ ಹಿಂದೆ 'ಕರ್ನಾಟಕ ಹೈಸ್ಕೂಲಿ'ನ ಅಗ್ನಿಪ್ರಳಯದಲ್ಲಿ ಭಸ್ಮೀಭೂತವಾದುವೆಂದು ತಿಳಿಯುತ್ತದೆ !

## ೫. ಸಂಪಾದನ ಕಾರ್ಯ

ಹೀಗಿರುವಾಗ ಶ್ರೀ. ಸಾಲಿಯವರ ಅನೇಕ ಮಿತ್ರರು, ಶಿಷ್ಯರು, ಅಭಿಮಾನಿಗಳು ಕೂಡಿ ಕೊನೆಗೊಮ್ಮೆ ಅವರ ಕವನಗಳನ್ನು ಏಕತ್ರ ಪ್ರಕಟಿಸ ಬೇಕೆಂದು ನಿರ್ಧರಿಸಿದರು ಅವುಗಳ ಸಂಕಲನದ ಹೊಣೆಯನ್ನು ಪ್ರಸ್ತುತ ಲೇಖಕನು ಹೊರಬೇಕೆಂದು ಸೂಚಿಸಿದರು, ಮುಂದೆ ಮುಂದೆ ಸಂಪಾದನ ಕಾರ್ಯವೂ ನಿಮ್ಮದೇ ಎಂದು ವಿದಿತಪಡಿಸಿದರು. ಶ್ರೀಯುತರ ಕವನ ಸಂಗ್ರಹವು ಇದುವೇ ಮೊದಲು ಬಾರಿ ಪ್ರಕಾಶನಗೊಳ್ಳುತಿರುವುದರಿಂದ ಇದರಲ್ಲಿ ಅವರ ಇಡಿಯ ಕಾವ್ಯಕೃತಿಯ ಸಮಾಲೋಚನಾತ್ಮಕ ಪರಿಚಯ ಮಾಡಿಕೊಡುವುದು ಪ್ರಸ್ತುತವೂ ವಿಹಿತವೂ ಆಗಿದೆ; ಇದು ಸಂಪಾದಕನ ಕರ್ತವ್ಯವೇ ಎಂದು ವಿಧಿಸಿದರು. ಅನೇಕ ಕಾರಣಗಳ ಮೂಲಕ ಈ ಕೆಲಸ ವನ್ನು ಕೈಕೊಳ್ಳಲು ಈ ಲೇಖಕನು ಸಿದ್ಧನಿರಲಿಲ್ಲ ಆದರೂ ಆತನು ಹಾಗೆ ಮಾಡಲು ಉಪಾಯವಿಲ್ಲದೆ ಉದ್ಯುಕ್ತನಾದನು. ತನಗಿಂತ ಸಮರ್ಥ ರಾದವರು ಇದನ್ನು ಮಾಡಿದ್ದರೆ ಚೆನ್ನಾಗುತ್ತಿತ್ತು ಎಂದು ಈ ಲೇಖಕನ ಹಾರ್ದಿಕ ಭಾವನೆ. ಆದುದರಿಂದ ಈ ಕೆಲಸವನ್ನು ಮಾಡಿ ಮುಗಿಸಿಯೂ ಆತನಿಗೆ ತೃಪ್ತಿಯಿಲ್ಲ.

ಇದರಲ್ಲಿ ಉಪಲಬ್ಧವಾಗಬಹುದಾದ ಎಲ್ಲೆಡೆಯಿಂದಲೂ ಎತ್ತಿ ಒಂದುಗೂಡಿಸಿದ ಶ್ರೀಯುತರ ಕವನಗಳನ್ನು ಒಂದು ವಿಶಿಷ್ಟ ದೃಷ್ಟಿಯಿಂದ ಆಯ್ದು ಅನುಗೊಳಿಸಲಾಗಿದೆ. ಇಲ್ಲಿ ಸಾಲುಗೊಂಡ ಪದ್ಯಗಳ ಪರಿವಿಡಿ ಭಾವಾನುರೂಪವೂ ವಿಷಯಾನುಸಾರಿಯೂ ಆಗಿದೆಯಲ್ಲದೆ ಕಾಲಾನು ಕ್ರಮಿಕವಾಗಿಲ್ಲ. ಚಾರಿತ್ರಕವಲ್ಲದ ಇಂತಹ ಕಾವ್ಯಗ್ರಂಥದಲ್ಲಿ ಕಾಲಾನು ಕ್ರಮವು ಪ್ರಧಾನವಲ್ಲ. ರಸಾತ್ಮಕವಾದ ಕಲಾಕೃತಿಯಲ್ಲಿ ಆ ಆ ಭಾವ–ರಸವಾಹಿನಿ ವಾಕ್ಯರೂಪದಿಂದ ಪ್ರಕಟವಾದ ತಿಥಿ–ವಾರಗಳಿಗಿಂತ ಅದರ ಪ್ರಕೃತಿ ರೀತಿ ರಚನೆಗಳಿಗೆ ಪ್ರಾಮುಖ್ಯತೆ ದೊರೆವುದು ಸಮಂಜಸವಾಗಿದೆ. ಈ ಸಂಗ್ರಹದಲ್ಲಿ ಶ್ರೀಯುತರು ಇದುವರೆಗೆ ಬರೆದ ಎಲ್ಲ ಕವನಗಳು ಸೇರಿಲ್ಲ. ಸ್ವತಂತ್ರ ಪುಸ್ತಕಗಳ ರೂಪದಿಂದ ಪ್ರಕಟವಾದ ಶ್ರೀರಾಮಚರಿತವಲ್ಲದೆ ಇನ್ನೂ ಹಲವು ಕವಿತೆಗಳನ್ನು ಕೆಲವೊಂದು ಕಾರಣಗಳ ಮೂಲಕ ಹಿಂದು

ಳಿಸಲಾಗಿದೆ. ಆದರೂ ಮುಖ್ಯ ಮುಖ್ಯವಾದ ಕವನಗಳೆಲ್ಲ ಇದರಲ್ಲಿ ಕಾಣಿಸಿಕೊಂಡಿವೆಯೆಂದೂ, ಒಂದು ವಿಧದಿಂದ ಇದು ಇದುವರೆಗಿನ ಶ್ರೀಯುತರ ಕಾವ್ಯಸೃಷ್ಟಿಯ ಸಾಮೂಹಿಕ ಪ್ರತೀಕವಾಗಿದೆಯೆಂದೂ ಹೇಳಿದರೆ ಸಲ್ಲುವುದು.

ಈ 'ಪರಿಚಯ'ವನ್ನು ಮಾಡಿಕೊಳ್ಳುವಾಗ ಈ ಕವನಗಳ ಬಗೆಗೆ ಈ ಲೇಖಕನು ಇಟ್ಟುಕೊಂಡ ದೃಷ್ಟಿ ಕೇವಲ ಸಂಪಾದಕೀಯುವಾಗಿದೆ. ಓದುಗರು ಇದರಲ್ಲಿ ಕಾಣಬೇಕಾದುದು ವಾಸ್ತವ ವ್ಯಾಸಂಗಿಯೊಬ್ಬನ ವ್ಯಕ್ತಿ ನಿರಪೇಕ್ಷ ವೈಯಕ್ತಿಕ ಪರಿಶೀಲನ (objective study of an individual writer ). ಈ ಕರ್ತವ್ಯಪಾಲನೆಯಲ್ಲಿ ಈತನಿಗೆ ಹೆಚ್ಚಾಗಿ ಹಾದಿ ತೋರಿಸಿದ ಒಂದು ಬೆಳಕೆಂದರೆ ಈ 'ಪರಿಚಯ'ದ ಆರಂಭದಲ್ಲಿ ನಿರೂಪಿಸಿದ ಕಥೆಯ ಸೂತ್ರವಾದ 'ಸಹೃದಯತೆ'.

## ೬ ಕವಿಯೂ ಕಾವ್ಯವೂ

ಕವಿ-ಸೃಷ್ಟಿಯಾದ ಕಾವ್ಯವು ಕವಿಜೀವನದ ಒಂದು ಅಂಗವೇ ಆಗಿರುವುದರಿಂದ ಕವಿಯ ಜೀವನ ಮತ್ತು ಕಾವ್ಯ ಇವುಗಳಲ್ಲಿ ಪರಸ್ಪರ ಸಂಬಂಧವಿದ್ದರೆ ಅಚ್ಚರಿಯಿಲ್ಲ. "ಯತ್‌ಸ್ವಭಾವಃ ಕವಿಃ ತದನುರೂಪಂ ಕಾವ್ಯಂ। ಕವಿಯಂತೆ ಕಾವ್ಯವು. ಕವಿ ಮತ್ತು ಕಾವ್ಯ ಇವುಗಳಲ್ಲಿ ಅತಿನಿಕಟ ಸಂಪರ್ಕವಿದೆ; ಉತ್ತಮ ಜೀವನವುಳ್ಳ ಕವಿಯೇ ಉತ್ತಮ ಕಾವ್ಯವನ್ನು ಸೃಷ್ಟಿಸಬಲ್ಲನು; ಎಂದು ಕೆಲ ವಿಚಾರಶೀಲರು ಹೇಳುವರು. ಇವೆರಡರಲ್ಲಿ ಯಾವ ಹತ್ತುಗಡೆಯೂ ಇಲ್ಲ; ಕವಿಯ ಜೀವನದಿಂದ ಆತನ ಕಾವ್ಯದ ಮಟ್ಟನ್ನು ಅಳೆವುದು ಸಾಧ್ಯವಿಲ್ಲ; ಆತನ ಭೌತಿಕ ಜೀವನ ಪ್ರಪಂಚವೇ ಬೇರೆ, ಪ್ರತಿಭೆಯಿಂದ ಪ್ರಾದುರ್ಭೂತವಾದ ಕಲಾಪ್ರಪಂಚವೇ ಬೇರೆ; ಎಂದು ಸಮರ್ಥಿಸುವವರು ಕೆಲರು. ಎರಡನೆಯ ಜಾತಿಗೆ ಉದಾಹರಣೆಯಾಗಬಹುದಾದ ಕವಿಗಳ ಜೀವನಪರಿಚಯದಿಂದ ಅವರ ಕಾವ್ಯಪರಿಚಯವು ಹೆಚ್ಚಲಾರದು. ಮೊದಲನೆಯ ಜಾತಿಗೆ ಸೇರಿದ ಕವಿಗಳ ಜೀವನ ಪರಿಚಯದಿಂದ ಅವರ ಕಾವ್ಯಪರಿಚಯಕ್ಕೆ ಕೆಲಮಟ್ಟಿಗೆ ಪ್ರಯೋ-

ಜನವಾಗಬಲ್ಲುದು. ಶ್ರೀಯುತರು ಇಂತಹ ವರ್ಗದ ಕವಿಗಳು. ಆದುದರಿಂದ ಅವರ ಜೀವನದಲ್ಲಿ ಎದ್ದು ಮೂಡಿದ ಒಲವುಗಳನ್ನು ಸಂಕ್ಷೇಪವಾಗಿ ಇಲ್ಲಿ ಲಕ್ಷಿಸುವ.

ಉಚ್ಚವಾದ ಕೆಲವೊಂದು ತತ್ವಗಳನ್ನು ಆದರ್ಶವಾಗಿ ಇಟ್ಟುಕೊಂಡು ಸಾಧ್ಯವಾದ ಮಟ್ಟಿಗೆ ಅವುಗಳನ್ನು ತಮ್ಮ ಜೀವನದಲ್ಲಿ ಆಚರಿಸುತ್ತ ಬಂದ ಸಾಧುಜೀವಿಗಳು ಶ್ರೀ. ಸಾಲಿಯಾನವರು. ವಿಧಿವಿಲಾಸದಿಂದ ಅವರ ಜೀವನದಲ್ಲಿ ಸುಖಕ್ಕಿಂತ ಕಷ್ಟಗಳೇ ಹೆಚ್ಚು. ಇವುಗಳಲ್ಲಿ ಕೆಲವು ಆದರ್ಶವನ್ನು ಬೆಂಬತ್ತಿ ಸಂಕುಚಿತ ಸ್ವಾರ್ಥವನ್ನು ಬದಿಗಿರಿಸಿದುದರ ಮೂಲಕ ಉಂಟಾದುವು.

ತಮ್ಮ ನಾಡು, ನುಡಿಗಳ ಬಗೆಗೆ ಉತ್ಕಟ ಪ್ರೇಮವೂ ಉಜ್ವಲ ಅಭಿಮಾನವೂ ಶ್ರೀಯುತರಲ್ಲಿ ಮನೆಮಾಡಿಕೊಂಡಿವೆ. ಕನ್ನಡವಿದ್ದೂ ಕನ್ನಡಕ್ಕೆ ಎರವಾದ ಆವರಣದಲ್ಲಿ ಹುಟ್ಟಿ ಬೆಳೆದವರಾದ ಇವರು ಮುಂದೆ ಸ್ವಪರಿಶ್ರಮದಿಂದ ಕನ್ನಡದಲ್ಲಿ ಪ್ರಭುತ್ವವನ್ನು ಗಳಿಸಿ ಸಾರಸ್ವತ ಸೇವೆ ಮಾಡಿದುದನ್ನು ನೋಡಿದರೆ ಶ್ರೀಯುತರ ನುಡಿಯ ಒಲುಮೆಯ ಪರಿ ಚೆನ್ನಾಗಿ ತಿಳಿಯಬರುತ್ತದೆ. ನುಡಿಯಂತೆ ನಾಡಿನ ಸಲುವಾಗಿಯೂ ಶ್ರೀಯುತರು ಮೌನವಾಗಿ ತೆಯ್ದಿದಾರೆ, ತಪಿಸಿದಾರೆ; ಸವೆದಿದಾರೆ. ತನು ಮನಧನಗಳನ್ನು ಸವೆಸಿದಾರೆ.

ಶ್ರೀಯುತರು ಕಲೋಪಾಸಕರು. ಇವರ ರಸಶಕ್ತಿ ಮುಳ್ಳಲ್ಲಿ ಅರಳಿದ ಹೂವಿನ ಸೊಗಸನ್ನು ಅರಸಿದೆ; ಕಷ್ಟಪೂರಿತ ಜೀವನಪ್ರಸ್ತರಗಳಿಂದ ಕಾವ್ಯನಿರ್ಝರಿಣಿಯನ್ನು ಹರಿಸಿದೆ. ಶ್ರೀಯುತರ ರಸಿಕತೆ ಎಂದಿಗೂ ಸಭ್ಯತೆಯ ಎಲ್ಲೆಯನ್ನು ಮೀರಿದುದಿಲ್ಲ.

ಶ್ರೀಯುತರ ಆಕೃತಿ ಕಿರಿದಾಗಿದ್ದರೂ ಹೃದಯ ವಿಶಾಲವಾಗಿದೆ. ಸ್ನೇಹಪರವಾದ ಸ್ವಭಾವ; ಉಪಕಾರಶೀಲ ಮನೋವೃತ್ತಿ; ಬಹುಜನರಿಗೆ ಬಂಧುಗಳಾಗಿರುವರು. ಆಯಾಸವಾದರೂ ಸಾಹಸಪಟ್ಟು ಸೇವೆಯಲ್ಲಿ ಸಫಲತೆಯನ್ನು ಕಾಣುವರು. ನಿಷ್ಠೆ ಆಸ್ತಿಕತೆಯ-ಧಾರ್ಮಿಕತೆಯ ಕಡೆಗೆ ಒಲಿದುದು; ಆದರೆ ಆ ಧಾರ್ಮಿಕತೆ ಅಂಧಶ್ರದ್ಧೆಯಿಂದ ಮಲಿನವಾದುದಲ್ಲ.

ಇವರ ಜೀವನದ ಈ ಸಂವಿಧಾನಗಳ ಛಾಯೆ ಇವರ ಕಾವ್ಯದಲ್ಲಿ ಹಲವೆಡೆ ಪ್ರತಿಬಿಂಬಿತವಾಗಿರುವುದು. ಅದೇ ಮೇರೆಗೆ ಕಾವ್ಯವೊಂದು ಜೀವನದ ಸಂಸ್ಕಾರವಾಗಿರುವುದರಿಂದ ಇವರ ಕಾವ್ಯದಲ್ಲಿ ಪ್ರಕಟಿತವಾದ ಕೆಲವು ಆದರ್ಶಗಳು ಧ್ಯೇಯನಿಷ್ಠವಾದ ಇವರ ಜೀವನದಲ್ಲಿ ಮೈಗೂಡಿ ಕೊಂಡಿರುವುವು. ಇಂತು ಇವರ ಕಾವ್ಯವನ್ನು ಕುರಿತು ವಿವೇಚಿಸುವಾಗ ಕವಿ ರವೀಂದ್ರರ "In art man reveals himself" ಎಂಬ ಉಕ್ತಿ ಯನ್ನು ಪಳಗಿಸಿ ಈ ಕವಿಯೂ ಆತನ ಕಾವ್ಯವೂ ಪರಸ್ಪರ ಬಿಂಬ ಪ್ರತಿಬಿಂಬವಾಗಿವೆ ಎಂದು ವರ್ಣಿಸಬಹುದು.

## ೭ ಕಾವ್ಯಸೃಷ್ಟಿ

ಈ ಕವಿಯ ಕಾವ್ಯಸೃಷ್ಟಿ ವಿಸ್ತೃತವಾಗಿದೆ, ವೈಚಿತ್ರ್ಯಯುತ ವಾಗಿದೆ. ಇದರ ಒಂದು ಪ್ರದೇಶದಲ್ಲಿ 'ಪುಲ್ಗಡಲು', 'ಬುತ್ತಿ' ಯಂತಹ ನಾಲ್ಕಾರು ಸಾಲಿನ ಚಿಕ್ಕ ಚಿಕ್ಕ ಕವನಗಳು ಮಿನುಗುತಿದ್ದರೆ ಇನ್ನೊಂದು ಪ್ರಾಂತ್ಯದಲ್ಲಿ 'ಅಭಿಸಾರ', 'ತಿಲಾಂಜಲಿ'ಯಂತಹ ಭಾವುಕ ಖಂಡಕಾವ್ಯ ಗಳಿವೆ. ಅವಕ್ಕೂ ಆಚೆಗೆ ನೂರು ನೂರು ಪದ್ಯಗಳಿಂದ ಮುಂದುವರಿದ ಶ್ರೀರಾಮಚರಿತದಂತಹ ಸುದೀರ್ಘ ಬೃಹತ್ ಕಾವ್ಯಖಂಡವು ಕಂಗೊಳಿಸು ತಲಿದೆ. ಈ ಕಾವ್ಯರಮಣಿ ಒಂದುಕಾಲ ಪ್ರಕೃತಿಮಾತೆಯ ಅಪೂರ್ವ ಸಂವಿಧಾನಗಳಿಗೆ ಮನಸೋತು ಬಿಸಿಲು ಮಳೆ ಗಾಳಿ ಹಗಲು ಇರುಳು ಎನ್ನದೆ, ಗಿರಿ ವನ ದುರ್ಗಸ್ಥಳಗಳಲ್ಲಿ ಸಂಚರಿಸಿ ಸೃಷ್ಟಿಯ ಪರಿಪರಿಯ ಸೊಬಗನ್ನು ಆಲಿಸುವಳು. ಇನ್ನೊಂದು ಸಮಯ ತಾಯ್ನಾಡಿನ ದುರವಸ್ಥೆ ಯನ್ನು ಕಂಡು ಕೊರಗಿ ಅವಳ ವಿಮೋಚನೆಯ ಸ್ಥಿರಸಂಕಲ್ಪದಿಂದ ಧ್ವಜ ವನ್ನು ಮೇಲೆತ್ತಿ ಸರ್ವಸ್ವವನ್ನು ಹೋಮಿಸಲು ಸನ್ನದ್ಧಳಾಗುವಳು. ಒಮ್ಮೆ ನಿದ್ದೆಯಲ್ಲಿ ನಗುವ ಎಳಮಗುವಿನ ನಿರ್ಮಲ ಹಾಸ್ಯದ ರಹಸ್ಯವಾವುದು ಎಂದು ಕೌತುಕಪಡುವಳು. ಇನ್ನೊಮ್ಮೆ ಮಗನ ಅಗಲಿಕೆಯಿಂದ ಬೆಂದು ಬಸವಳಿದು ಭಗವಂತನಿಗೆ ಮೊರೆಹೋಗುವಳು. ಒಂದು ಸಲ ಸಮಾಜದ ಅನ್ಯಾಯಗಳನ್ನೂ ಮಾನವ-ಹೃದಯದ ವೈಪರೀತ್ಯವನ್ನೂ ವಿವೇಚಿಸಿ ಕಟುತರವಾಗಿ ಖಂಡಿಸುವಳು. ಬೇರೊಂದು ಬಾರಿ ವಿಶ್ವದ ಅಮೇಯ

ತತ್ತ್ವವನ್ನು, ಜೀವಿಗಳ ಜನ್ಮ-ಮೃತಿಯ ಗೂಢವನ್ನು, ಕವಿಯ ಅಂತರಂಗದ ಆಳವನ್ನು ಶೋಧಿಸಲು ಪ್ರಯತ್ನಿಸುವಳು.

ಈ ಕಾವ್ಯಸೃಷ್ಟಿ ಕಲೆಯಿಂದ ಒಡಗೂಡಿದೆ. ಕನ್ನಡಿಗರು ಕೀರ್ತಿವಂತಿಕೆಯಿಂದ ಸೃಜಿಸಿ ನಿಲ್ಲಿಸಿದ ಸಚೇತನ ಶಿಲ್ಪಕಲಾ ಪ್ರಪಂಚದೊಡನೆ ಇದನ್ನು ಹೋಲಿಸಬಹುದು. ವಿಚಾರಪುರಸ್ಸರ ವಿನ್ಯಾಸ, ಸಂಸ್ಕಾರ ಸಂಪತ್ತಿಯ ವಿಲಾಸ, ಸಂಯಮದ ರಚನೆ, ರುಚಿರ ಕಲ್ಪನೆ, ನಯವಾದ ಕೈವಾಡ, ಸಫಲ ವಿನಿಯೋಗ ಇವುಗಳು ಇವೆರಡರಲ್ಲಿಯೂ ಸಾಮಾನ್ಯವಾದ ವಿಶೇಷಗಳಾಗಿವೆ. ಈ ಕಾವ್ಯಸೃಷ್ಟಿ ಚಿತ್ರಸೃಷ್ಟಿಯಂತೆ ಚಿತ್ತಾರದಿಂದ ಬೆಳಗಿವೆ, ಶಬ್ದ ಚಿತ್ರಗಳಿಂದ ಅಲಂಕೃತವಾಗಿದೆ.

ಈ ಕಾವ್ಯಸೃಷ್ಟಿಯಲ್ಲಿ ಸಾಹಿತಿಯ ವಾಗ್ವೈಭವವಿದೆ, ಕವಿಯ ಭಾವನೆಯಿದೆ, ರಸಿಕನ ಸುಭಗರತಿ ಇದೆ, ಸಂಗೀತದ ಮಾಧುರ್ಯವಿದೆ, ಆಸ್ತಿಕನ ನಂಬುಗೆ ಇದೆ, ಪ್ರಾಪಂಚಿಕನ ಲೋಕಾನುಭವವಿದೆ, ರಾಷ್ಟ್ರೀಯನ ಪ್ರಖರ ಸ್ವಾಭಿಮಾನವಿದೆ, ದಾರ್ಶನಿಕನ ತತ್ತ್ವದರ್ಶನವಿದೆ. ಕವಿಕೃತಿಗಳ ಇಂತಹ ವ್ಯಾಪಕತೆಯನ್ನು ಅನುಲಕ್ಷಿಸಿ ಕವಿತ್ವದ ಒಂದು ಲಕ್ಷಣವನ್ನು ಹೇಳುತ್ತ ರಾಜಶೇಖರನು ಹೀಗೆ ಉದಾಹರಿಸಿರುವನು:

ಪ್ರಸರತಿ ಕಿಮಪಿ ಕಥಂಚನ ನಾಭ್ಯಸ್ತೇ ಗೋಚರೇ ವಚಃ ಕಸ್ಯ ।<br>
ಇದಮೇವ ತತ್ಕವಿತ್ವಂ ಯದ್ವಾಚಃ ಸರ್ವತೋದಿಕ್ಕಾಃ ॥

## ೮ ಕಾವ್ಯಸ್ವರೂಪ

ಈ ಕವಿಯ ಗೀತಗಳನ್ನು ಓದುವಾಗ ಓದುಗರ ಬಗೆಯನ್ನು ಸೆಳೆವುದು ಅವುಗಳ ಪ್ರಧಾನ ಗುಣವಾದ ಸತ್ತ್ವಶಾಲಿತೆ, ಇಲ್ಲವೆ ಸಾಹಿತ್ಯ ಪರಿಭಾಷೆಯಲ್ಲಿ ಹೇಳುವುದಾದರೆ ಭಾವಪುಷ್ಟತೆ. ಭಾವವು ಕಾವ್ಯದ ಆತ್ಮವು. ಭಾವವಿಲ್ಲದ ಕಾವ್ಯವು ಪ್ರಾಣವಿಲ್ಲದ ಶರೀರದಂತೆ. ಕಾವ್ಯ ಜೀವನದ ಈ ತಿರುಳನ್ನು ಈ ಕವಿಯ ಕೃತಿಗಳಲ್ಲಿ ಸಾಕಷ್ಟು ಸೇವಿಸಬಹುದು.

ಈ ಕವಿಯ ಒಂದೊಂದು ಕವನವೂ ಒಂದೊಂದು ಭಾವ, ಒಂದೊಂದು ವಿಚಾರ, ಒಂದೊಂದು ತತ್ತ್ವ, ಒಂದೊಂದು ಅರ್ಥದಿಂದ

ದೀಪನಗೊಂಡಿದೆ. ಹುರುಳಿಲ್ಲದ ಹುಸಿ ಮಾತಿನಿಂದ ಹೆಣೆದ ಮಾಲೆಯಾಗಲಿ, ರಸವಿಲ್ಲದ ಕಸದಿಂದ ಹೊಸೆದ ಹಗ್ಗವಾಗಲಿ, ಕಸುವಿಲ್ಲದ ಕಲ್ಪನೆಯ ಕೋಲಿನಿಂದ ನಿಲ್ಲಿಸಿದ ಆಗಸಹಂದರವಾಗಲಿ ಈ ಕಾವ್ಯಪ್ರಪಂಚದಲ್ಲಿ ದುರ್ಲಭವಾದುದು. ದ್ರವ್ಯಲೋಭದಿಂದ ಯಾವನಾದರೊಬ್ಬ ದೊಡ್ಡಯ್ಯನನ್ನು ಮೆಚ್ಚಿಸಲು ರಚಿಸಿದ ಕಾವ್ಯವಿವಲ್ಲ; ಕೀರ್ತಿಗೆ ಆಸೆಪಟ್ಟು ಬರೆಯಬೇಕು ಎಂಬ ಒತ್ತಾಯದಿಂದ ಕೋಣೆಯಲ್ಲಿ ಕುಳಿತು ಸಾಧಿಸಿದ ಹಠಯೋಗದ ಕವಿಕರ್ಮವಿದಲ್ಲ. ಆ ಆ ಸನ್ನಿವೇಶಗಳಿಂದ ಸಂಚಾಲನೆಗೊಂಡು ಕಲ್ಲೋಲಿತವಾದ ಬಗೆಗಡಲ ಭಾವನೋರ್ಮಿಗಳಿಂದ ನಿರರ್ಗಳವಾಗಿ ನೆರೆದುಂಬಿ ಪ್ರವಹಿಸಿದ ಸಹಜ ಸ್ವಚ್ಛಂದ ಸಾರಸ್ವತ ಸರಿತೆಯಿದು. ಈ ಕವಿಯ ಕವನಗಳೆಲ್ಲ ಪ್ರಾಯಃ ಇಂತಹ ಭಾವಭೂಯಿಷ್ಟ ಭಾವಗೀತಗಳೇ (Lyrics) ಆಗಿವೆ.

ಭಾವಪುಷ್ಟಿಯಿಂದೊಡಗೂಡಿದ ಪ್ರಸನ್ನತೆ ಈ ಭಾವಗೀತಗಳ ಸರಲಸ್ವಭಾವವಾಗಿದೆ. ಭಾಷಜಟಿಲತೆಯಿಂದ ಇವುಗಳ ಚೈತನ್ಯವು ಕುಸಿದಿಲ್ಲ. ಅಭಿಪ್ರಾಯಕ್ಲಿಷ್ಟತೆಯಿಂದ ಇವುಗಳ ಸುಗಮತೆ ವಕ್ರವಾಗಿಲ್ಲ. ವಿಚಾರಕೃತಕತೆಯಿಂದ ಇವುಗಳ ವಿಶುದ್ಧತೆ ವಿಕೃತವಾಗಿಲ್ಲ. ಅಹೇತುಕ ಪದಯೋಜನೆ, ಅರ್ಥಹೀನ ಶಬ್ದಾಡಂಬರ, ವಿರೂಪ ಭಾವಾವಿಷ್ಕರಣ ಇವು ಇಲ್ಲಿಯ ಕಾವ್ಯಧರ್ಮಕ್ಕೆ ಅಪರಿಚಿತ ಪದಾರ್ಥಗಳು.

ಈ ಭಾವಗೀತಗಳು ಸರಲವಾದರೂ ಸುಂದರವಾಗಿವೆ. ಈ ಸೌಂದರ್ಯವು ಅಸ್ವಾಭಾವಿಕ ರಸಾಲಂಕಾರಗಳ ಮೂಲಕ ಉಂಟಾದುದಲ್ಲ. ಸುಲಕ್ಷಣ ಅವಯವಗಳಿಂದ ಒಪ್ಪುವ ಶರೀರದಂತೆ ಪರಿಶುದ್ಧವಾದ ಭಾಷೆ ಈ ಸೌಂದರ್ಯದ ಅಧಿಷ್ಠಾನವಾಗಿದೆ. ಭಾವಾನುಸಾರಿಯಾದ ಹೃದ್ಯ ಮಧುರ ಅರ್ಥಪೂರ್ಣ ವಾಕ್‌ಸರಣಿಯಿಂದ ಈ ಸೌಂದರ್ಯವು ಭೂಷಿತವಾಗಿದೆ; ಸಹಜವಾದ ರಸಾಲಂಕಾರಗಳಿಂದ ಕಳೆಗೊಂಡಿದೆ. “ ಕಾವ್ಯಮಲಂಕಾರಾತ್ ಸೌಂದರ್ಯಮಲಂಕಾರಃ ” ಎಂದು ವಿವೇಚಿಸುವ ಲಾಕ್ಷಣಿಕರ ಕಾವ್ಯಸ್ವಾರಸ್ಯದ ಸಾರಭೂತ ಕಲ್ಪನೆಯನ್ನು ಈ ಸೌಂದರ್ಯವು ಅನುಸರಿಸುವಂತಹದು ಆಗಿದೆ. “ ವಾಕ್ಯಂ ರಸಾತ್ಮಕಂ

ಕಾವ್ಯಂ ", ಇಲ್ಲವೆ " ರಮಣೀಯಾರ್ಥಪ್ರತಿಪಾದಕಶಬ್ದಃ ಕಾವ್ಯಂ " ಎಂದು ಸಾರಿದ ಸಂಸ್ಕೃತ ಲಕ್ಷಣಕಾರರ ಮತ್ತು ',The most delightful and perfect form of utterance" ಎಂದು ವಿವೇಚಿಸಿದ ಸುಪ್ರಸಿದ್ಧ ಆಂಗ್ಲ ವಿಮರ್ಶಕ ಮ್ಯಾಥ್ಯೂ ಅರ್ನೋಲ್ಡನ ಕಾವ್ಯದ ಸ್ವತಂತ್ರ ಬೃಹತ್ ಲಕ್ಷಣಸೂತ್ರಕ್ಕೆ ಈ ಕವನಗಳು ಬಹುಮಟ್ಟಿಗೆ ಉದಾಹರಣೆಯಾಗಬಲ್ಲುವು.

ಈ ಕವನಗಳೆಲ್ಲವು ಆಧುನಿಕ ಕವನಗಳಾಗಿವೆ. ಆಧುನಿಕ ಕವನಗಳ ಮುಖ್ಯ ಸ್ವರೂಪವಾದ ವಿಷಯಸ್ವಾತಂತ್ರ್ಯ ಮತ್ತು ವರ್ಣನಾನಾವೀನ್ಯವನ್ನು ಇವುಗಳಲ್ಲಿ ಕಾಣಬಹುದಾಗಿದೆ. ರಾಜಶೇಖರನು ಉದಾಹರಿಸಿದಂತೆ,

ಶ್ರೀಮಂತಿ ರಾಜ್ಞಾಂ ಚರಿತಾನಿ ಯಾನಿ
ಪ್ರಭುತ್ವಲೀಲಾಶ್ಚ ಸುಧಾಶಿನಾಂ ಯಾಃ
ಯೇ ಚ ಪ್ರಭಾವಾಸ್ತಪಸಾಮೃಷೀಣಾಂ
ತಾಃ ಸತ್ಕವಿಭ್ಯಃ ಶ್ರುತಯಃ ಪ್ರಸೂತಾಃ ||

ನೃಪವರರ ಚರಿತೆಗಳಾಗಲಿ, ಅಮರವೃಂದಗಳ ಲೀಲೆಗಳಾಗಲಿ, ಮುನಿಪುಂಗವರ ತಪಃಪ್ರಭಾವಗಳಾಗಲಿ, ಒಂದೂ ಈ ಕವನಗಳಿಗೆ ವಿಷಯವಾಗದಿದ್ದರೂ ಸರಸತಿಯ ವಿಶಾಲ ವಿಶ್ವದಿಂದ ಇವು ಬಹಿಷ್ಕೃತವಾಗಲಾರವು.

ವಿವಿಧಭಾವಗಳನ್ನು ಮಿಡಿಯುವ ಈ ಕವನವೀಣೆಯಲ್ಲಿ ರಾಷ್ಟ್ರಭಕ್ತಿ ಮತ್ತು ನಿಸರ್ಗರತಿ ಎಂಬ ಎರಡು ಸ್ಥಾಯಿತಂತ್ರಿಗಳ ನಿನಾದವು ಸ್ಫುಟವಾಗಿದೆ, ಉನ್ನತವಾಗಿದೆ, ಪುನಃ ಪುನಃ ಶ್ರವಣೀಯವಾಗಿದೆ. ಎಂತಹ ಪರಿಸ್ಥಿತಿಯಲ್ಲಿಯೇ ಇರಲಿ, ಅಂತರಂಗದಲ್ಲಿ ಮೊಳೆತು ಅಂತಃಕರಣದಲ್ಲಿ ಬೆರೆತ ಈ ಸಂನಿವೇಶಗಳಿಂದ ಸಂಸ್ಪರ್ಶನಗೊಂಡ ಸೂಕ್ಷ್ಮ ಕವಿಹೃದಯವು ಆಕಸ್ಮಿಕವಾಗಿ ಮಾರ್ದನಿಗುಡುವುದು. ಬಣ್ಣದ ಎಳೆಗಳಂತೆ ಈ ಕಾವ್ಯಪಟದ ಹಾಸಿನಲ್ಲಿ ಹೊಕ್ಕು ಹೊಕ್ಕಿನಲ್ಲಿ ಎದ್ದು ತೋರುವ ಈ ಎರಡು ಎದೆಯೊಲವಿನ ಒಳಸುಳಿವುಗಳನ್ನು ಈ ಕಾವ್ಯಸೃಷ್ಟಿಯ ಹಲವೆಡೆಗಳಲ್ಲಿ ಗುರುತಿಸಬಹುದು.

## ೯ ಪ್ರಕೃತಿ ಗೀತಗಳು (ನಿಸರ್ಗದ ನೆರೆಯಲ್ಲಿ)

ಇವು ಸಂಖ್ಯೆ, ವಿಸ್ತಾರ ಮತ್ತು ವಿವಿಧತೆಯ ಪರಿಯಿಂದ ಪ್ರಾಧಾನ್ಯವನ್ನು ಪಡೆಯುವಂತಹವು. ನೆಲ, ಬಾನು, ನೀರು ಈ ಪ್ರದೇಶಗಳಲ್ಲಿಯ ಪ್ರಕೃತಿಯ ವಿವಿಧ ವಿಧಾನಗಳು, ಚಲನವಲನಗಳು, ಶಾಂತ ಮೃದು ಸುಂದರ ಗಂಭೀರ ಕ್ರೂರ ಕರಾಲ ಅದ್ಭುತ ಆವಿಷ್ಕಾರಗಳು, ಋತುಗಳು, ದಿನರಾತ್ರಿಗಳು, ತೆರೆ, ತೊರೆ, ಮೋಡ, ಮಳೆ, ಗಾಳಿ, ಬೆಟ್ಟ ದರಿ, ಇವೆಲ್ಲವು ಒಂದು ಬಗೆಯಿಂದ ಈ ಗೀತಗಳ ವಿಷಯವಾಗಿವೆ ಇವುಗಳಲ್ಲಿ ವರ್ಣಿತವಾದ ಸೃಷ್ಟಿಯ ಒಂದೊಂದು ದೃಶ್ಯವೂ ಸ್ಫುಟವಾಗಿದೆ; ವರ್ಣ ರಾಗ ರೇಷೆಗಳಿಂದ ಚಿತ್ರಿತವಾಗಿ ಕಾಂತಿಯಿಂದ ತೊಳಗಿದೆ. ನಿಸರ್ಗದ ನಾನಾ ಸಂನಿವೇಶಗಳನ್ನು ಪರಾಂಬರಿಸುವ ಕವಿಯ ಭಾವನೆ ತಿಳಿಯಾಗಿದ್ದು ಅದನ್ನು ಪ್ರಕಟಿಸುವ ರೀತಿ ತಿಳಿತಿಳಿಯಾಗಿದೆ. ಇಲ್ಲಿಯ ಕೆಲವು ಚಿತ್ರಗಳು ಶುಚಿ ರಮ್ಯವಾಗಿವೆ.

ನೈಜತೆ ಮತ್ತು ಚಿತ್ರಮಯತೆಯಿಂದ ರಂಜಿಸುವ ಈ ಗೀತಗಳಲ್ಲಿ ಓದುಗರ ಹೃದಯವನ್ನು ಸೆರೆಗೆಯ್ಯುವ ಶಕ್ತಿ ಇದೆ. ಅರ್ಥಾನುಗುಣವಾಗಿ ಔಚಿತ್ಯವರಿತು ವಿನಿಯೋಗಿಸಿದ ಕಟುಕೋಮಲ ವರ್ಣವಿರಚಿತ ಪದ-ಸರಣಿ ಇದಕ್ಕೆ ಸದಾ ಸಹಕಾರಿಯಾಗಿದೆ. ಸಿಡಿಲಿನ ರಭಸದಿಂದ 'ಕಡ ಕಡಲ್ ಕಡಲೆಂದು' ಸಿಡಿದೊಡೆದು,

> ಗುಡುಗುಡಿಸುತ ಅಬ್ಬರದೆ ಮಿಂಚುಗೋಲ್ಗಳನು ಎಚ್ಚು
> ಕಡು ಮಸಗಿ ಕೋಡುಗಲ್ಗಳನೊಡೆದು ನೇಸರಿನ ಬಿಂಬಿಸಲನೇ ನುಂಗುತೆ,

ರೌದ್ರತೆಯಿಂ ಮೆರೆದು ಎತ್ತಲುಂ ಬಿರುಸರದ ಬಲ್‌ಸರಿಗಳ ಸುರಿಸುವ ಮುಂಗಾರ ಶಬ್ದಚಿತ್ರವನ್ನು ಆಲಿಸಿ ಮಳೆಗಾಲದ ಮುಮ್ಮಳೆಯ ಸಂರಂಭವು ಬಗೆಯನ್ನು ಕದಡಿದರೆ,

> ಕಳ ಕಳ ನಿನಾದದಿಂ ಕುಣಿಯುತಾನಂದದಿಂ
>
> ........... ......................................
>
> ಸುಳಿಯುತುನ್ಮಾದವಶಮಾಗಿ ಪರಿದೋಡುತುಂ ಕಣ್ದಪ್ಪಿ ಕಲ್ಲೆಡವುತೆ
> ಚಳಿಸು ಮುಂಬರಿಯುತ್ತುಂ ಅರೆಗಳಂ ಪಾಯ್ದು ಒಡೆದು

ಭೋರೆಂದು ದರುವಿನಲ್ಲಿ ಬೀಳುವ ಕಾಳ್ಪುರದ (ಕಾಡ ತೊರೆಯ) ವಾರಿ ಸಂಕುಳದ ವಿಕಟಗತಿಯ ವರ್ಣನ ವೈಚಿತ್ರ್ಯವು ವಿಚಿತ್ರದ ಕಲಮಲವನ್ನು ಹುಟ್ಟಿಸುತ್ತದೆ. ಕವಿಯ ಸಂಗಾತಿಯಾಗಿ ನಿಸರ್ಗದೊಂದಿಗೆ ಸಮರಸ ವಾಗಿ ಬೆರೆತು ಅವಲೋಕಿಸಿದಲ್ಲಿ, ಕಾರ್ಗಾಲದ ಇರುಳಲ್ಲಿ ಎಲ್ಲಿಯುಂ ಸಾಂದ್ರಂ ಪಸರಿಸಿರ್ಪ ದೆಸೆಬಿದ್ದಂ ಅಂಧಂತಮದ ಹೃದಯಗ್ರಾಹಿ ರೂಪು,

ಚಂದಿರನ ತಂಬೆಳಗು ಪಸರಿಸಿರೆ
ಮಂದಹಾಸಂಗೊಳುತುಂ ಇರ್ಪ ಕಲ್ಗಳುಂ,

ಪೆರೆಯ ತೀರ ದನಿ, ಗಿರಿಯ ಮೇಲಿನ ನೆಳಲು, ಬಿಸಿಲು, ಕೆರೆ, ಮುಂತಾದ ಸೃಷ್ಟಿಯ ಚಮತ್ಕಾರಗಳು ದೃಷ್ಟಿಗೆ ಬೀಳುವುದಲ್ಲದೆ,

ಈ ಗಿಡದ ಎಳದಳಿರೊಳು ಮೊಯರ್ಗರೆದು
ಕೋಗಿಲೆ ಕರೆವುದು ನಲ್ಲಳನು ಒಸೆದು
ಆ ಗಿಡದಿಂ ಪೆಣ್ಗೋಗಿಲೆ ಉಲಿವುದು
ಬೀಗಿ ಬೀಗಿ ನಲ್ಲನ ದನಿಗೇಳ್ದು

ಇಂತಹ ಸಹಜ ಸಂನಿವೇಶಗಳ ಸವಿಯನ್ನು ಆಸ್ವಾದಿಸುವ ಲಲಿತ ಸಾಮರ್ಥ್ಯವು ಉಂಟಾಗುತ್ತದೆ.

ಇಲ್ಲಿ ಕಂಗೊಳಿಸುವ ನಿಸರ್ಗವು ಸ್ತಿಮಿತ ಸ್ಥಿರ ಜಡ ಪ್ರಕೃತಿಯಲ್ಲ; ಅನಂತ ಸರಭಸ ಸಂಚಲನ ಗತಿಗಳಿಂದ ಪ್ರಚೋದಿತವಾದ ಸಚೇತನ ವಿಶ್ವ. ಬೇಸಗೆಯಲ್ಲಿ ಬುಗರಿಯಂತೆ ಗರಗರನೆ ತಿರುಗುವ ಸುಂಟರೆಗಾಳಿ;

ಇರುಳ ಕಳ್ತಲೆಯ ಅಳವಿಗಳೆದ ಕಾಳಿಮದ ಭೀ-
ಕರತೆಯಂ ಪೆರ್ಚಿಸುತೆ ಬೇರ್ವೆರಸು ಕಿಳ್ತು ಪೆ-
ರ್ಮರಗಳಂ ನೆಲಕೆ ಉರುಳಿಸುತ್ತುಂ........ಗರ್ಜಿಸುತೆ

ದಿಕ್‌ಸಂಧಿ ಸಡಿಲೆ ಪರ್ವ ಸಮಯ ಕ್ಷುಬ್ಧಶರಧಿವೊಲ್ ಶ್ರವಣ ಭೈರವ ರವ ಪ್ರೋದ್ದಾಮಮಾದ ಬಿರುಗಾಳಿ, ಬಾಂದಳದೊಳ್ ವಾರಿಯಿಂದಂ ಕದಕ್ಕದಿಸಿ ತುಳುಂಕುವ ಅಂಬುವಾಹಂ; ನಲಿನಲಿದು ಆಡುವ, ಆನಂದದಿಂ ಕುಣಿವ, ನೊರೆಗಳಂ ತೇಲಿಸುತೆ ವೇಗದಿಂ ಓಡುವ, ಕಲ್ಗಳಂ ದೂಡುವ, ಮಾರ್ದನಿಗಳಿಂ ತುಂಬುವ, ದುರಿತ ದುರ್ವಾರ ದಾವಾಗ್ನಿಯಂ ಮುರಿದು

ಮುಕ್ಕುವ ಹರಿಪಾದಸರಿಸಿಜೋದ್ಭವೆ; ಕುದಿಕುದಿಯುತೆ, ಹಲ್ಮೊರೆಯುತೆ, ಬೆಂಕಿಯ ಕಾರುವ, ಹೆಮ್ಮರಗಳನು ಉರುಳಿಸುವ ಕಾರ್ಮೋಡಗಳು; ಗಗನದ ಆಚೆಯ ನಗದ ಶಿಖರಮುನೇರಿ ತಿರೆಯಿಂದ ಪಾರಲ್ ಉಜ್ಜುಗಿಸುವ ಮುಗಿಲ್;

ತಳಿರೊಳು ಕುಣಿಯುತೆ ಪೊಸಪೂಗೊಂಚಲ-
ಗಳ ಸೆಂಡಾಡುತೆ ಬಲ್ವಿದಿರುಗಳಾ
ಮೊಳೆಗೈತಂದೊಲವಿಂದಲಿ ನಿಂದು

ಕೊಳಲನು ಬಾಜಿಸುವ ತಣ್ಗಾಳಿ; ವಾಯುಚಲನಕೆ ವೀಚಿಮಾಲೆಗಳ ಲಾಸ್ಯಮಾಡುವ, ವಿವಿಧ ವರ್ಣೋತ್ಕರದಿಂದ ಸುರುಚಿರವಾದ, ಕುಸುಮ ಸಾಗರದ ನರುಗಂಪು; ಇವು ಇಲ್ಲಿಯ ಸೋಜಿಗಗಳು.

ಈ ಸೋಜಿಗದಲ್ಲಿಯ ಸೋಜಿಗವು ಕವಿಯ ಅಮಿತ ಸೌಂದರ್ಯದ ಅನಿಮಿಷ ಚಕ್ಷು. ಪ್ರಕೃತಿಯನ್ನು ಕಾಣುವ ಕವಿಯ ರಸದೃಷ್ಟಿಯಲ್ಲಿ ನವನವೋನ್ಮೇಷಿ ಸೌಂದರ್ಯದ ಸ್ಥಾಯಿಭಾವವು ನಿತ್ಯ ನೆಲೆಗೊಂಡಿದೆ. ಚಂದ್ರ, ತಾರೆಗಳು, ಬೆಳುದಿಂಗಳು, ಮೆಲ್ಗಾಳಿ, ಪಸಲೆಯಂತಹ ಸ್ವಭಾವ-ರಮಣೀಯ ವಸ್ತುಗಳಲ್ಲಿ ಅಲ್ಲದೆ ಬಿರುಗಾಳಿ, ನವವೃಷ್ಟಿ, ಕಾಳ್ಪುರ, ಕತ್ತಲೆಯಂತಹ ವಿಷಮತೆಯಲ್ಲಿಯೂ ಕವಿಯ ಬಗೆ ಲಲಿತತೆಯ ಮಾಧುರ್ಯವನ್ನು ಸವಿಯುತ ನಲವಾಂತು ತಲ್ಲೀನವಾಗುವುದು. ರೌದ್ರತೆ ಅಳುಂಬದಿಂ ಮೆರೆದೊಡಂ ಭೀತಿಯಿಂದೆ ಆತನು ಚಲಚಿತ್ತನಾಗದೆ,

(೧) ..........................ವಿಶ್ವಮೀ—
ತೆರದೆ ಸಂರಂಭಮಯಮಾದೊಡಂ ಚೆಲ್ವಿಗೇಂ
ಕೊರತೆಯೆ ?

(೨) ಆವಿಧಾನದಿಂದಮೀ ರಮಣೀಯಮಾಯ್ತು;

(೩) ಒಂದೆರಳ್ಮೂರು ನಾಲ್ಕೈದಾರು — ಸಾಲ್ಗು೦—
ಎಂದಿಗುಂ ಮುಗಿಯದೀ ಸೃಷ್ಟಿಯ್ಯೆಸಿರಿಯಣಿಕೆ !

(೪) ಬೆಡಗಿಗಿದಕಂತಮಿಲ್ಲು !

ಎಂದು ಮುಂತಾಗಿ ನಿರರ್ಗಳವಾದ ಅಖಂಡ ಸೌಂದರ್ಯಗೀತವನ್ನು ಹಾಡುವನು. ಸೌಂದರ್ಯೋಪಾಸನೆಯ ಈ ವಿಶಾಲದೃಷ್ಟಿ ಕವಿಯ ನೈಜ ನಿಸರ್ಗರತಿಯ ಫಲವಾಗಿದೆ.

ಇಂತು ಸೌಂದರ್ಯಸೇವನೆಯಲ್ಲಿ ನಿರತನಾದ ಕವಿಯ ಮನಸ್ಸಿನಲ್ಲಿ ನಿಸರ್ಗವು ಹೊಸತಾದ ಪರಿಣಾಮವೊಂದನ್ನು ಹುಟ್ಟಿಸುವುದು. ಆತನು ಬಾಹ್ಯ ಪ್ರಪಂಚಕ್ಕೆ ಎರವಾಗಿ ಲೌಕಿಕ ಪಾಶಗಳಿಂದ ಮುಕ್ತನಾಗುವನು.

ಸಂಸ್ಕೃತಿಯ ಪಾಶದಿಂ ಬಿಗಿವಡೆದ ಮನವೆನ್ನದು
ಇದೊ ಬಂಧನಂಗಳಂ ಪರಿದನಾಯಾಸದಿಂ
ಮದಮತ್ತಕರಿಯವೋಲ್ ಸ್ವಚ್ಛಂದ ವೃತ್ತಿಯಿಂ
ಮುದದ ಸಾಗರದೊಳೋಲಾಡಿ ನಲಿದಪುದು !

ಈ ಸ್ವಚ್ಛಂದ ವೃತ್ತಿಯ ಇನ್ನೊಂದು ಸ್ವರೂಪವು ಸ್ವಾತಂತ್ರ್ಯಲಾಲಸೆ.

**ಮನದೊಳೇಂ ಸ್ವಾತಂತ್ರ್ಯದಭಿಲಾಷೆಯೊಗೆದತ್ತೊ ಈಗಳೀ**
**ದೃಶ್ಯದಿಂದೆ !**

ಈ ಭಾವನೆಯ ವಿಲಾಸವನ್ನು ರಾಷ್ಟ್ರೀಯ ಕವನಗಳಲ್ಲಿ ಕೆಲಮಟ್ಟಿಗೆ ಕಾಣಬಹುದು.

ಸೌಂದರ್ಯದಂತೆ ನಿಸರ್ಗವು ಕವಿಗೆ ಶಾಂತಿಯ ಚಿರಂತನ ನಿಧಿಯಾಗಿದೆ. ನೊಂದ ಮನದ ನೋವನ್ನು ಆರಿಸುವ ದಿವ್ಯೌಷಧಿ ಅದು. ಈ ಶಾಂತಿ ಸಂಜೀವನವನ್ನು ಎಲ್ಲಿ ಹೇಗೆ ಅರಸಬೇಕು ಎಂಬುದರ ಮರ್ಮವು ಕವಿಗೆ ತಿಳಿದುದು.

ಅರಿಯದು ಜನಂ ಶಾಂತಿ ಜೀವನದ ಸಾರವೆಂ-
ದರಿಯದೈ !
........................................................
ಎಲೆ ಮನವೆ, ನೀನಂದಿನಿಂದಾವಗಂ ಬಯಸಿ-
ದೊಲವಿನೆಡೆಯಿದು ! ಜನದ ಕಲಹದಿಂ ನೊಂದು
ವಿಹ್ವಲಮಾದ ಶಾಂತಿ ಬಂದಿಲ್ಲಿ ನೆಲಸಿದುದೇನೊ ನಿರ್ಜನಂ ಬನಮಿದೆಂದು?
........................................................
ಜೀವನಕಲ್ತೆ ಈ ವಗೆಯ ಚೆಲ್ವು ಸಂಜೀವನಂ ?

ಈ ಸಂಜೀವನದಿಂದ ಕಂದಿ ಕುಂದಿದ ಜೀವಲತೆ ಪೂವಿಡಿದು ಸೊಂಪೆಸೆವುದು. ಮನಸ್ಸು ಮಲರಹಿತವಾಗಿ ಮತ್ತೆ ಬಲಿವುದು. ಗಿರಿ ತೊರೆ ದರಿಗಳ ಸಾನ್ನಿಧ್ಯದಿಂದ ಅಪೂರ್ವ ಸಂಸ್ಕಾರ ಪಡೆದು ಪಾವಿತ್ರ್ಯವನ್ನು ಔನ್ನತ್ಯವನ್ನು ಗಾಂಭೀರ್ಯವನ್ನು ತಳೆವುದು.

ಇದರ ನೆರೆಯೊಳ್ ಮನದ ಮಾಲಿನ್ಯಮುಳಿಯದೈ !
ಇದರ ಗಾಂಭೀರ್ಯಮೇಂ ಪಾವನಮೊ ! ಕಾರ್ಪಣ್ಯ—
ಮಿದರಿದಿರೊಳಿರಲಾರ್ಪುದೆ ?.... .......
ಇದರೆಡೆಯೊಳಿರದು ಸಂಸ್ಕೃತಮನಕ್ಕಸ್ಥಿರತೆ

ಸೌಂದರ್ಯ ಮತ್ತು ಶಾಂತಿ, ನಿಸರ್ಗದ ಈ ಎರಡು ವಿಶೇಷಗಳನ್ನು 'ಕೊಡಗು' ಮತ್ತು 'ರಾಮನಗುಳಿ' (ಉತ್ತರ ಕನ್ನಡ ಜಿಲ್ಲೆಯಲ್ಲಿಯ ಒಂದು ವನಸ್ಥಲಿ) ಈ ಕವನಗಳು ವಿಶದಗೊಳಿಸುವುವಾಗಿವೆ. ಇವುಗಳಲ್ಲಿ ಮೊದಲನೆಯದು ಪ್ರಕೃತಿಯ ಚೆಲುವಿಗೆ ಮೀಸಲಾದ ಚೆಲುವಿನ ನಲ್ವಾಡು. ಇಲ್ಲಿ ಕವಿ ಕಂಡ ಸೌಂದರ್ಯಸಾಕ್ಷಾತ್ಕಾರವು ವಿಶ್ವತೋಮುಖವಾದುದು.

ನೆಲಮಾಗಸಂ ದಿಕ್ಕುಗಳ್ ರಾಮಣೀಯಕದ
ನಿಲಯಂಗಳ್.

ಇಲ್ಲಿಯ ಒಂದೊಂದು ಅಂಶವು ಪರಿಪರಿಯ ಹೊಸಪರಿಯ ಚೆನ್ನಿನಿಂದ ಚೆಂದಪಡೆದುದು.

(೧) ಇದೊ ಮಂಜು ಬಿತ್ತರಿಸಿ
ಕಡಲವೊಲ್ ತೋರ್ದಪುದು ಮೇಲೆಳ್ದ ಗಿರಿಸಾನುಗಳ್
ದ್ವೀಪನಿವಹಮಾಗೆ

(೨) ಪೊಸತೆರದ ಬಗೆವಗೆಯ ವಿಹಗಂಗಳೆತ್ತಲುಂ
ಮಿಸುಪ ವೈವಣ್ಣದಿಂ ಮನವೊಲಿಪ ಮಾಟದಿಂ-
ದೆಸೆದು ನುಣ್ದನಿಗುಡುತೆ ನಲಿದಪುವು.

(೩) ಪರಿವ ಕಾಳ್ಪುರದ ಮೆಲ್ಲುಲಿಯಿಂದೆ ಬಗೆಗೊಳಿಪ
ದರಿಯಿತ್ತಲ್; ಉತ್ತುಂಗ ಶಿಖರಂಗಳಿಂದೆಸೆವ
ಗಿರಿಯುತ್ತಲ್; ಏಂ ಪೆಂಪೊ !

(೪) ಬೀವೂಗಳ ಇನಿಗಂಪಿಗೆ ಎನಿತೊಂದು ತುಂಬಿಗಳೊ !

'ರಾಮನಗುಳಿ'ಯಲ್ಲಿಯೂ ಎಂದಿನಂತೆ ಕವಿ ಪ್ರಕೃತಿಯ ಚೆಲುವಿನ ಸೆಲೆಯನ್ನು ಕಾಣುವನು;

ತೊಲಗೆನ್ನೈ ಇಂತು ಚೆ-
ಲ್ವು ಇನಿದಾಗಿ ನಿಲೆ ಮುಂದೆ !

ಆದರೆ ಈಗ ಆತನ ಬಗೆಯನ್ನು ಸೆಳೆದುದು ಬರಿಯ ಚೆಲುವಲ್ಲ, ಆ ಚೆಲುವಿನ ನಲುಮೆ; ನಿಸರ್ಗದ ಅದ್ಭುತ ಶಕ್ತಿಯಾದ ಶಾಂತಿ; ಆ ಶಾಂತಿಯ ಆವಾಸವಾದ ದರಿ ತೊರೆ ಮರ ಬಳ್ಳಿಗಳ ಬನಸಿರಿ

ತಮ್ಮ ತಮ್ಮ ಪರಿಯಿಂದ ಸುಮಧುರವಾದ ಈ ಎರಡೂ ಕವನಗಳಲ್ಲಿ ಕವಿಹೃದಯವು ನಿಸರ್ಗದಿಂದ ನಾಡಿನತ್ತ ಹೊರಳುವುದು. 'ಕೊಡಗಿ'ನಲ್ಲಿ ನಾಡಿನ ಹಿಂದಿನ ಘನತೆ ನೆನಪಾಗಿ,

ಎನ್ನ ನಾಡಂದಮಿಂತೆಂದು ಭಾವಿಸಿದೆನಿ-
ಲ್ಲಿನ್ನೆಗಂ ! ಭಾವನೆಗೆ ಚೆಂದಮಿದು ನಿಲುಕುವುದೆ ?
ನಿನ್ನ ಸೌಂದರ್ಯಮಿದು ನಿನ್ನ ಪೆರ್ಮೆಯು ಕುರುಪು ! ಕರುನಾಡೆ
ಪುಣ್ಯಭೂಮಿ !
ಇನ್ನರಿವುದರಿದಲ್ತು ನಿರ್ಮಳಾಂತಃಕರಣ-
ರುನ್ನತಗುಣೋದಯರ್ ಮಂಗಳನಿಕೇತನರ್
ನಿನ್ನೊಡಲೊಳಿಂತುದಯಿಸಿದರೆಂದು! ಕರುನಾಡು ದೇವರಳ್ಕರಿನ ನಾಡು !

ಎಂಬ ಸಂತೋಷ ಸಮಾಧಾನ ಭಾವವು ನೆಲೆಗೊಂಡರೆ, 'ರಾಮನಗುಳಿ' ಯಲ್ಲಿ ನಾಡಿನ ಇಂದಿನ ಹೀನಸ್ಥಿತಿಯ ಮನವರಿಕೆಯಾಗಿ,

ಎದೆ ಬಿರಿವುದೈ ! ಎನ್ನ ಕರುನಾಡದಿಂದಿನೀ-
ಕದನಂಗಳಿಂದೆ ಛಿನ್ನಾಂಗಮಾಯ್ತು ಕಟಕಟ !

ಎಂಬ ವಿಷಣ್ಣಭಾವನೆ ಮೂಡುವುದು. ಆದರೆ ಮರುಗಳಿಗೆಯಲ್ಲಿ 'ಹೃದಯದ ಮಾರ್ದನಿ'ಯೊಂದು ಮೇಲೆದ್ದು

ಪಿರಿದೆನ್ನ ತಾಯ್ನಾಡು ! ಪಿರಿದಿಂದು ಪಿರಿದಂದು
ಪಿರಿದಾವಗಂ ಮುಂದು ! ಕರುನಾಡು ಭಾರತದ
ಪಿರಿದುತ್ಸವೋಲ್ಲಾಸ ಭೂಮಿಯೆಂದೀ ಸೊಬಗು ಪೇಳ್ದಪುದು

ಎಂದು ಅಮರ ಆಶಾವಾದದ ಆಳವಾದ ವಿಶ್ವಾಸವನ್ನು ಬೀರುವುದು.

ಪ್ರಕೃತಿಯ ರಚನೆಯನ್ನು ಕುರಿತು ಕವಿಯ ವಿಶ್ವಾಸವು ಭಾವುಕನಿಗೆ ಸಲ್ಲುವಂತಹದು. ಈ ಚರಾಚರ ಅನಂತ ವಿಶ್ವವು ಸರ್ವಚಾಲಕ ಪರಮಾತ್ಮನ ಸೃಷ್ಟಿಯಾಗಿದ್ದು ಅಖಿಲ ವ್ಯಾಪಿಯಾದ ಆತನಿಂದ ಪ್ರಾಪ್ತ ವಾದ ಆತನ ಒಂದು ರೂಪು, ಎಂದು ಕವಿಯ ನಂಬುಗೆ.

ಒಂದೊಂದು ನಕ್ಷತ್ರವೊಂದೊಂದು ಲೋಕವೆನಿ–
ತೊಂದು ವಿಶ್ವದ ಬಿತ್ತರವೊ ! ವಿಶ್ವಮೂರ್ತಿ, ನಿ–
ನ್ನಿಂದವಿದೊ ? ನೀನೆ ಇದೊ ? ಕೋ ವೇದ ? ದೇವ ಸರ್ವಾಧ್ಯಕ್ಷ,
ಪುರುಷೋತ್ತಮ !

ಪುರುಷೋತ್ತಮನ ಈ ಪ್ರಪಂಚದ ಗುಣ ಪ್ರಕರ್ಷವು ಬಹುವಿಧವಾದುದು. ಯಾವೊಂದು ವಿಧವು ಹೆಚ್ಚಿನದೆಂದು ಹೇಳುವುದು ?

ಲಲಿತತೆಯ ನಿಲಯವೋ ಶಾಂತಿಯಾವಾಸವೋ
ಒಲವಿನಾಗಾರವೋ ನೈರ್ಮಲ್ಯದೆಡೆಯೊ ಮಂ–
ಗಲದ ಕೇತನವೊ ನಲ್ಮೊಗದ ತಾಯ್ಮನೆಯೊ !........ಬಹುರೂಪಿ ಚೆಲ್ವು

ಇನಿತು ಸುಂದರ, ಸುಖಕರ, ಶುಭಂಕರ ಸೃಷ್ಟಿಯನ್ನು ನಿರ್ಮಿಸಿದಾತನ ಹಿರಿಮೆ ಎನಿತು ಆಗಿರಬೇಕು ? ಆತನ ಘನತೆಗೆ ಆತನ ಈ ಸೃಷ್ಟಿಯೇ ಏಕಮೇವ ಸಾಕ್ಷಿ.

ಎನಿತೊಂದಲಂಪು ಗಡ, ಪೆಂಪು ಗಡ, ಮಂಗಲಾ–
ತ್ಮನೆ, ಸುತ್ತಲುಂ ನೋಡಲೆಲ್ಲೆಡೆಯೊಳಂ ನಿನ್ನ
ಘನತೆಯೇಂ ಸೊಂಪೇರಿ ಸಿರಿನಲ್ಲ, ನಲ್ಮೊಗಮನೊದವಿಸುತೆ
ನೆಲಸಿರ್ಪುದೋ !

ಅನಂತ ಅದ್ಭುತ ವ್ಯಾಪಾರಗಳಿಗೆ ಎಡೆಯಾದ ಈ ವಿಶ್ವವು ಜಡವಲ್ಲ, ಚೈತನ್ಯದಿಂದ ತುಂಬಿದುದು ಎಂದು ಕವಿ ತಿಳಿದು ತೋರಿಸುವನು. ಈ ದೃಷ್ಟಿಯಿಂದ ಸೃಷ್ಟಿಯತ್ತ ನೋಡುವಾಗ ಪ್ರಕೃತಿಯ ಹಲವು ಚಲನವಲನ ಗಳು ಕವಿಯ ಭಾವನೆಯಲ್ಲಿ ಸಚೇತನ ಜೀವಿಗಳ ಚೇಷ್ಟೆಗಳಾಗಿ ಪರಿಣಮಿಸಿ ಚಿತ್ರಮಯವಾದ ಕೆಲವು ಉತ್ಕಟ ರೂಪಕಕವನಗಳಿಗೆ (symbolistic poems) ಜನ್ಮವಿತ್ತಿವೆ. ಇದರ ಸೊಬಗಿನ ಚಮತ್ಕೃತಿಯ ವಿಲಾಸವನ್ನು ‘ ಕಾರ್ ಮೋಡಗಳು ’, ‘ ನವವೃಷ್ಟಿ ’ ‘ ಕಾಳ್ಪುರಂ ’,

'ಹಿಂಗಾರ್', ಮುಂತಾದ ಗೀತಗಳಲ್ಲಿ ಸ್ಫುಟವಾಗಿ ಪರಿಶೀಲಿಸಬಹುದು. ಇವುಗಳಲ್ಲಿ ಮೊದಲಿನದಂತೂ ಇಡಿಗೆ ಇಡಿ ರೂಪಕ ಗೀತವಾಗಿದೆ.

ಪ್ರಕೃತಿಯ ಬಗೆಗೆ ಕವಿಗಿರುವ ಆತ್ಮೀಯತೆ ಅನ್ಯಾದೃಶವಾದುದು. ಅವಳು ಆತನ ಸದಾಕಾಲೀನ ಸುಹೃದ್; ಸಕಲ ಆಧಿವ್ಯಾಧಿಗಳನ್ನು ಪರಿಹರಿಸಿ ಸರ್ವ ಶಕ್ತಿ ಸುಖವನ್ನು ದಯಪಾಲಿಸುವ ಮಾಯಿಕ ಮಾಟಗಾತಿ; ಸಾಲದು— ಆತನು ಹಂಬಲಿಸುವ ಕಂದ, ಅವಳು ಅಚ್ಚುಮೆಚ್ಚಿನ ನಚ್ಚಿನ ತಾಯಿ!

ಮನವಿಲ್ಲಿ ತಾಯ ಮೊಲೆವಾಲನು ಉಂಬ ಎಳ ಮಗುವ-
ನನುಕರಿಪುದಚ್ಚರಿಯೆ? ತೊಲಗೆನ್ನೈ, ............
...............ತೊಲಗಲೀಯಡೆಯಿನೊಲ್ಲೆಂ! ತಾಯೆ, ತಾಯೆ,
ತಾಯೇ!!!

ಇಂತಹ ತಾಯಿಯ ಮಡಿಲಲ್ಲಿ ಅಪೂರ್ವ ಸುಖವನ್ನು ಸವಿಯುತ ಸವಿಯುತ ಕವಿ ಬಾಹ್ಯಲೋಕವನ್ನೇ ಮರೆಯುವನು. ಆತನ ಪ್ರಕೃತಿಯ ಆತ್ಮೀಯತೆ ಏಕಾತ್ಮತೆಯಲ್ಲಿ ಪರಿವರ್ತಿಸಿ ಅದ್ವೈತದ ಆನಂದಾನುಭೂತಿಯನ್ನು ಪಡೆವುದು. ತಲ್ಲೀನ ಮನಸ್ಸಿನ ಭಾವನಿರ್ಭರ ಆರೋಹಣವನ್ನು ಕವಿ ಪ್ರಶಾಂತವಾದ 'ಚೆಂದಿರನ ತಂಬೆಳಗಿ'ನಲ್ಲಿ ಒಂದು ದಿನ ಇಂತು ಅನುಭವಿಸಿದಾನೆ.

ಮನದೊಳೊದವಿದುದು ಮೃದು ಮಧುರ ಭಾವನೆಯೆನ್ನ
ಮನಮೆ ಈ ಬಾಹ್ಯಸೃಷ್ಟಿಯ ರೂಪೊ? ಸೃಷ್ಟಿಯೇ
ಮನದ ರೂಪೋ? ಮನದೊಳಿರ್ಪುದಂ ಸೃಷ್ಟಿಯೊಳ್ ಕಂಡಪೆಂ!
ಚಿತ್ರವೆನಿತೊ!
ಮನಮಳಿದುದೋ ಸೃಷ್ಟಿಯಳಿದುದೋ ಮೇಣ್ ತಿಳಿಯೆ—
ನೆನಗೀಗಳೆತ್ತಲುಂ ತೋರ್ಪುದೊಂದೇ ಒಂದು!
ಮನಮಿಲ್ಲ ಸೃಷ್ಟಿಯಿಲ್ಲಾನಂದಮಾನಂದಮಾನಂದವೊಂದೆ ಒಂದು!

ಪ್ರಕೃತಿಗೀತಗಳಲ್ಲಿ ಈ ಪರಿಯಾಗಿ ಕಂಗೊಳಿಸುವ ಚಿತ್ರಸೃಷ್ಟಿ

ಜೀವ-ರಾಗ-ರಸ-ಗಂಧ ಪೂರಿತ ಬಣ್ಣ ಬಣ್ಣದ ಚಿತ್ರವಿಚಿತ್ರ ಪ್ರಪಂಚ, ಎಲ್ಲಕ್ಕೂ ಹೆಚ್ಚಾಗಿ ಚಲ ಸೃಷ್ಟಿಯ ಸಂಚಲತ್ ಸಂನಿವೇಶಗಳ

(dynamic forms of nature) ಲಲಿತ ನಿರೂಪಣೆ ರಸಿಕರನ್ನು ಮುಗ್ಧಗೊಳಿಸುವ ಕಾವ್ಯಲೋಕದ ಹೃದ್ಯ ವಸ್ತುವಾಗಿದೆ. ಈ ಚಿತ್ರಸೃಷ್ಟಿಯನ್ನು ನಿರೀಕ್ಷಿಸುವಾಗ ಆಂಗ್ಲ ಸಾಹಿತ್ಯ ಪರಿಚಿತರಿಗೆ ಅಲ್ಲಿಯ ಶೆಲ್ಲಿ ಕವಿಯ ಈ ವಿಧದ ಚಿತ್ರ ಪ್ರಪಂಚವು ನೆನಪಿಗೆ ಬಾರದಿರದು.

## ೧೦ ರಾಷ್ಟ್ರೀಯ ಕವನಗಳು (ತಾಯ ಮಡಿಲಲ್ಲಿ)

ಪರಿಮಾಣದಲ್ಲಿ ಪ್ರಕೃತಿಗೀತಗಳಿಗಿಂತ ಕಿರಿಯವಾದರೂ ಗುಣ ಸಮುಚ್ಚಯದಲ್ಲಿ ಹಿರಿಯವಾದುವು ರಾಷ್ಟ್ರೀಯ ಕವನಗಳು. ತನ್ನ ನುಡಿ, ತನ್ನ ನಾಡು, ತನ್ನವರ ಸಾಹಿತ್ಯ, ತನ್ನವರ ಚರಿತ್ರೆ ಇವುಗಳ ಬಗೆಗೆ ಸದಭಿಮಾನ ಪುರಸ್ಕೃತ ಉಚ್ಚ ಪ್ರೇಮವನ್ನು ಪ್ರಕಟಿಸುವ ಕವನಗಳು ರಾಷ್ಟ್ರೀಯ ಕವನಗಳು ಎಂದು ಕರೆಸಿಕೊಳ್ಳುವುವು. ಆಳ ಆಳವಾದ ಭಾವನೆ ಇಲ್ಲಿಯವುಗಳ ಜೀವಾಳವಾಗಿದೆ; ಅಂತಿಮ ತ್ಯಾಗವು ಇವುಗಳ ಪುರುಷಾರ್ಥವಾಗಿದೆ. ಇಲ್ಲಿ ಪ್ರಕಾಶಿತವಾದ ಸ್ವಾಭಿಮಾನಜ್ಯೋತಿ ಪರಿಶುದ್ಧವೂ ಪ್ರಭಾಮಯವೂ ಆಗಿದೆಯಲ್ಲದೆ ಅವಾಸ್ತವ ಅಭಿನಿವೇಶದಿಂದ ಮಲಿನವಾಗಿಲ್ಲ. ಒಮ್ಮೊಮ್ಮೆ ಇವುಗಳ ಭಾವನೆಯ ಉಗ್ರತೆ ಸಹ್ಯತೆಯ ಆಚೆಯ ಎಲ್ಲೆಗೆ ಕೈನೀಡುವುದಾಗಿದೆ.

ನುಡಿಯ ಒಲುಮೆ ಮತ್ತು ನಾಡಿನ ಹಿರಿಮೆಯನ್ನು ಬಿಂಬಿಸುವ ಈ ಕವನಗಳು ಉಪದೇಶಿಕತೆಯಿಂದ (sermonising) ಅಲಿಪ್ತವಾಗಿ ಕವನ ಕಲೆಯಿಂದ ಅಲಂಕೃತವಾಗಿದ್ದುದು ಅವುಗಳ ಒಂದು ಹೆಚ್ಚಳವೆಂದು ತಿಳಿಯಬಹುದು. ಗೀತದ ಇಂಪಿನಿಂದಲೂ ಸಂಗೀತದ ಸೊಂಪಿನಿಂದಲೂ ಇವುಗಳ ಆಕರ್ಷಕತೆ ಅಭಿವೃದ್ಧಿಗೊಂಡಿದೆ. ಇವುಗಳ ಭಾವಗಭೀರತೆಯೂ ಅಭಿಮಾನದ ಉತ್ಕಟತೆಯೂ ಕೆಲವೆಡೆ ಅತಿಶಯೋಕ್ತಿಯಲ್ಲಿ ಅಭಿವ್ಯಕ್ತವಾಗಿದ್ದರೂ ಇಂತಹ ಅತ್ಯುಕ್ತಿ ಸರ್ವಥಾ ದೋಷವಲ್ಲ, ಅನುರಕ್ತಿಯ ಒಂದು ಅಲಂಕಾರವೆನ್ನುವಷ್ಟು ಉಲ್ಲಸಿತವಾಗಿದೆ.

'ಕನ್ನಡಂ' ಈ ಕವನದಲ್ಲಿ ಪ್ರಕಟವಾದ ಕವಿಯ ಕನ್ನಡಪ್ರೇಮವನ್ನು ಆಲಿಸಬೇಕು. ಕನ್ನಡವೆಂಬುದು ಗಾಳಿಯ ಅಲೆಯಲ್ಲಿ ತೇಲಿ ಬಂದು ಕಿವಿಗೆ ತಾಗಿ ಕರಗಿ ಹೋಗುವ ಬರಿಯ ಒಂದು ಸ್ವರವಲ್ಲ,

ಅದೊಂದು ಅಪೂರ್ವವಸ್ತು. ಅದನ್ನು ಆತನು ಮೆದುವಾಗಿ ಮುಟ್ಟಬಲ್ಲನು; ಅದರ ಸ್ಫುರದ್ರೂಪವನ್ನು ನಯವಾಗಿ ನೋಡಬಲ್ಲನು; ಅದರ ಮೋಹಕತೆಗೆ ಮುಗ್ಧನಾಗುವನು; ಅದಕಾಗಿ ಹಂಬಲಿಸಿ ಹಾಡಿಕೊಳ್ಳುವನು; ಅದರ ಸವಿಯ ಸೋನೆಯನ್ನು ಸವಿಸವಿದು ಸಂತುಷ್ಟನಾಗುವನು; ಕೊನೆಗೆ ಅದು ದೇವಿಯಾಗಲು, ತಾನು ಅವಳ ಉಸಿರಿನಲ್ಲಿ ಉಸಿರಾಡುವ ಅನನ್ಯ ಉಪಾಸಕನಾಗುವನು.

ಗುಡಿಯನ್ನು ಕಟ್ಟಿ ಕಳಸವಿಡುವಂತೆ ಇಲ್ಲಿ ಭಾವ ವೈಚಿತ್ರ್ಯದೊಂದಿಗೆ ಭಾವನೆಯ ಗೋಪುರವು ಏರುತ್ತ ಹೋಗಿದೆ. ಸಹೇತುಕವಾದ ಸೊಬಗಿನ ಶಬ್ದ ಸರಣಿಯೊಂದಿಗೆ,

ತಂಗೊಳದ—ಮೆಲ್ಲೆಲರ—ನಲ್—ಸೋಂಕು,
ಮಾವಿನ—ಎಳದಳಿರ—ಸೊಗಯಿಪ—ನುಣ್ಪು,
ಬಿರಿವೂವ—ಬಳಿಯ—ತುಂಬಿಯ—ಸರಂ,

ಮೊದಲಾದ ಮಂಜುಲ ತಾಲಲಯಬದ್ಧ ಭಾವಾನುಗುಣ ಪದಗತಿಯ ಮೂಲಕ ಈ ಕವನವು ಹೃದಯಂಗಮವಾಗಿದೆ. ಒಂದೊಂದು ಪದವನ್ನು ಮೆಲ್ಲಮೆಲ್ಲನೆ ಒಂದೊಂದಾಗಿ ಉಚ್ಚರಿಸಿ, ಅದರದರ ಅರ್ಥಶಕ್ತಿಯ ಆಳವನ್ನು ಮನನ ಮಾಡುತ್ತ ಓದಿ ಓದಿದಂತೆ ಇದರ ಹೃದಯಂಗಮತೆ ಹೆಚ್ಚು ಹೆಚ್ಚು ಸ್ಫುಟವಾಗುವುದು; ಈ ಕವನದಲ್ಲಿ ಉಕ್ತವಾದ ಕನ್ನಡದ ಇಂಪು ಸೊಂಪಿನ ಸಿರಿಗೆ ಈ ಕವನವು ತಾನೇ ಒಂದು ಉದಾಹರಣೆಯಲ್ಲವೆ ಎಂಬ ರಹಸ್ಯವು ಮನಸ್ಸಿನಲ್ಲಿ ಮೂಡಿ ನಿಲ್ಲುವುದು.

ಈ ಪರಿಯ ಕನ್ನಡದ ಆಸಕ್ತಿಯೇ ಬೇರೊಂದು ಬಗೆಯಿಂದ 'ಕನ್ನಡ'ವು ಈ ಕವನದಲ್ಲಿ ನಿರೂಪಿತವಾಗಿದೆ ಅದೇ ಆ ಹೆಮ್ಮೆಯ ಕನ್ನಡವು ಇದರ ವಸ್ತುವಾಗಿದ್ದರೂ ಮೊದಲು, ಮುಗಿತಾಯ, ನಡವಳಿ, ಭಾಷೆ, ಗತಿ, ರೀತಿ, ಎಲ್ಲದರಲ್ಲಿಯೂ ಇದರ ಠೀವಿ ಈ ಮೊದಲಿನ ಕವನಕ್ಕೆ ಭಿನ್ನವಾಗಿದೆ. ಮೊದಲಿನದು ಮಧುರ ಭಾವವನ್ನು ಒಳಗೊಂಡಿದ್ದರೆ, ಮತ್ತಿನದು ವೀರಭಾವವನ್ನು ಇಂಬುಗೊಳಿಸಿದೆ. ಒಂದರಲ್ಲಿ ಸಾಹಿತ್ಯದ ಸರಸತೆ ಇದ್ದರೆ, ಇನ್ನೊಂದರಲ್ಲಿ ಚರಿತ್ರೆಯ ಧೀರತೆಯಿದೆ. ಅದು ಭಕ್ತಿಯೋಗವೆನಿಸಿದರೆ, ಇದು ಬುದ್ಧಿಯೋಗವೆನಿಸುವುದು.

ಕನ್ನಡಂ, ತಂಗೊಳದ, ಸೋಂಕು, ನುಣ್ಪು, ಸರಂ, ಕಂಪು, ಇಂಪು, ಮೊದಲಾದ ಗೀತಘಾಟಿಯ ಮೃದು ವರ್ಣಗಳ ಟೇಂಕಾರದಿಂದ 'ಕನ್ನಡಂ' ಈ ಕವನವು ಮೊದಲುಗೊಂಡು ಮುಂದುವರಿದರೆ, 'ನಿನ್ನಿನದು ನುಡಿಯಲ್ಲ ಮೊನ್ನಿನದು ನುಡಿಯಲ್ಲ' ಎಂದು ನೇರವಾಗಿ ಆಕಸ್ಮಿಕವಾದ ನಿವೇದನ ಶೈಲಿಯಲ್ಲಿ ಆರಂಭಿಸಿ 'ಕನ್ನಡವು' ಈ ಕವನವು ಮುಂದಕ್ಕೆ ಓಡುತ್ತದೆ. ಈ ಎರಡೂ ಕವನಗಳು ಅಷ್ಟೇ ಚಿತ್ತವೇಧಕವಾಗಿವೆ. ಆದರೆ ಒಂದರ ಮನೋಹರತೆ, ಅಲಂಕಾರಯುತ ಕುಸುರು, ಕುಸುರಿನ ಕಲ್ಪನಾವಿಲಾಸದ ಮೂಲಕ ಉಂಟಾದುದು; ಮತ್ತೊಂದರ ಪ್ರಭಾವಶಾಲಿತೆ ನಿರಾಭರಣ ವಿಚಾರ ಪ್ರಚುರತೆಯಿಂದ ಜನಿಸಿದುದು.

ಭಾವವೊಂದನ್ನುಳಿದು ಇದರಲ್ಲಿಯ ಶಬ್ದಗಳು, ವಾಕ್ಯಗಳು, ನುಡಿಗಳು ಎಲ್ಲವು ಚಿಕ್ಕವು. ಮಾತುಗಳು ಮಿತಿಯಿಂದ ಬಳಸಿದುವು.

ನಿನ್ನಿನದು ನುಡಿಯಲ್ಲ, ಮೊನ್ನಿನದು ನುಡಿಯಲ್ಲ
ಕನ್ನಡವು

ಸರಿ, ಕನ್ನಡವು ಹೊಸನುಡಿಯಲ್ಲ, ಹಳನುಡಿ; ಎಂದು ಹೇಳಿದ ಹಾಗಾಯಿತು; ಆದರೇನು ? ಎಷ್ಟೋ ಕಾಡು ಜನಾಂಗಗಳು ಆಡುವ ನುಡಿಗಳು ಇದಕ್ಕೂ ಹಳವು ಆಗಿರಬಹುದು ಎಂದು ಕಾಕು ದನಿಯನ್ನು ಹೊರಡಿಸಿದರೆ ಕೇಳಿ:

ನು ಡಿ ದ ರಿ ದ ನಾ ಪು ರಾ ತ ನ ರೊ ಸೆ ದು ।

ಆ ಪುರಾತನರು ಇದನು ಒಸೆದು ನುಡಿದರು. ಈ ಒಂದು ವಾಕ್ಯವು ಕನ್ನಡದ ಮಹತ್ತರವಾದ ವಾಙ್ಮಯ ಪರಂಪರೆಯನ್ನು ಮಾರ್ಮಿಕವಾಗಿ ಸೂಚಿಸಿ ಆ ಕಾಕಸ್ವರವನ್ನು ಅಲ್ಲಿಯೆ ಕುಕ್ಕಿ ಬಿಡುವುದು. ಕನ್ನಡದ ವಾಙ್ಮಯ ಪರಂಪರೆ ಪ್ರಾಚೀನವಾದುದು ಅಲ್ಲವೆ, ಎಂದು ಯೋಚಿಸುವಷ್ಟರಲ್ಲಿ

ಇದು ಶಕ್ತಿ !

ಎಂಬ ಸಿಡಿಲಿನ ಮಡುಗು ಕಿವಿಗೆ ಬಿದ್ದು ಒಳಗೊಳಗೆ ಒಂದು ಶಕ್ತಿ ಸಂಚರಿಸುವುದು; ಅವಧಾನವು ಏಕಾಗ್ರವಾಗುವುದು. ಬಳಿಕ

ಇದು ಶಕ್ತಿ ! ಇದು ವೀರವಾಣಿ ! ಈ ಕನ್ನಡವು !

ಎಂದು ಇನ್ನೊಮ್ಮೆ ಸಾವಧಾನ ಪೂರ್ವಕ ಓದಿ ಮುಗಿಸುವಷ್ಟರಲ್ಲಿ ಅರ್ಥ ಪ್ರಸಾದವನ್ನು ಆರೋಹಣ ಮಾಡಿದ ಮನಸ್ಸಿನ ತರಗತಿ ಎತ್ತರಿಸುವುದು; ಕನ್ನಡದ ಮೇಲುಮೆಯನ್ನು ಕಂಡುಕೊಳ್ಳಲು ಅದು ತವಕಪಡುವುದು. ಆಗ ಹದವಾದ ಹೃದಯಾಕಾಶದಲ್ಲಿ ಒಂದು ಮಿಂಚು ಮೂಡುವುದು:

ಇದು ಗೆಯ್ದು ಗೆಯ್ಮೆ ವಿಶ್ವಕ್ಕೆ ವಿಸ್ಮಯಕರವು!

ಈ ಮಿಂಚಿನ ಬೆಳಕಿನಲ್ಲಿ ರಾಜಕೀಯ ವೈಭವ ಮತ್ತು ಸಾಂಸ್ಕೃತಿಕ ಘನತೆಯಿಂದ ರಂಜಿತವಾದ ತೆರೆಯ ಮೇಲೆ ಕನ್ನಡ ಸಾಹಿತ್ಯದ ಭವ್ಯ ಚಿತ್ರವು ಗೋಚರವಾಗುವುದು. ಅದರ ದರ್ಶನವಾಗುತ್ತಿರುವಾಗ ಕನ್ನಡದ ಅಸಾಧಾರಣ ಪಾತ್ರತೆಯ ಅರಿವು ಅಚ್ಚೊತ್ತಿಕೊಳ್ಳುವುದು.

ಇದಕೊಂದು ರೂಪುಂಟು, ಬಗೆಯುಂಟು, ಚೆಲ್ವುಂಟು!
ಇದಕೆ ಮಾರ್ದವವುಂಟು, ಕಾಠಿನ್ಯವಿದಕುಂಟು!
ಇದು ನೃಪೋತ್ತುಂಗ ನೃಪತುಂಗನಿಗೆ ಮೆಚ್ಚಿನದು.
ಇದು ಜಗದ್ವಂದ್ಯ ಕವಿ ಪಂಪನಿಗೆ ಮೆಚ್ಚಿನದು.
ಇದು ಭಕ್ತ ಬಸವೇಶನೊಲಿದೊಲಿದು ನುಡಿದ ನುಡಿ.
ಇದು ಪೂಜ್ಯ ದಾಸರಾದರದಿಂದೆ ನುಡಿದ ನುಡಿ.

ಈ ಒಂದೊಂದು ಮಾತು ಚಿತ್ತಭಿತ್ತಿಯಲ್ಲಿ ಚಿರಕಾಲ ನಟ್ಟು ಬಾಳುವಂತ ಹದು. ಹೀಗೆ ಹಲವು ಪ್ರಮಾಣಗಳಿಂದ ಕನ್ನಡದ ಮಹಿಮೆಯನ್ನು ಪ್ರತಿಪಾದಿಸುತ್ತ ಪ್ರತಿಪಾದಿಸುತ್ತ,

ಇದು ಕುಮಾರವ್ಯಾಸರಳ್ಕರಿನ ನುಡಿಯಲ್ತೆ ?
ಇದುವೆ ತಾಯ್ನುಡಿ ವೀರ ಹುಕ್ಕಬುಕ್ಕರಿಗಲ್ತೆ ?

ಎಂದು ಎರಡು ಪ್ರಶ್ನೆಗಳನ್ನು ಕೇಳಿ ಗಕ್ಕನೆ ವಿಷಯೋಪಸಂಹಾರವಾಗು ವುದು. ಈ ಪ್ರಶ್ನೆಗಳು ಬರಿಯ ಕೇಳಿಕೆಗಳಲ್ಲ; ಇಷ್ಟು ಉದ್ದಕ್ಕೂ ಹೇಳಿ ದರೂ ಮಣಿಯದೆ ಮೊಂಡತನದಿಂದ ಮೋರೆಯೆತ್ತಿ ನಿಂತಿರುವ ಸಂಶಯ ಪಿಶಾಚಗಳ ಉಚ್ಚಾಟನ ಮಂತ್ರಗಳು!

ಇದು ಕುಮಾರವ್ಯಾಸರ ಅಳ್ಕರಿನ ನುಡಿ ಅಲ್ತೆ ?

ಕುಮಾರ ವ್ಯಾಸ—ಕುಮಾರನಾಗಿಯೂ ತಾತ ವ್ಯಾಸನ ಸಂಸ್ಕೃತ ಕೃತಿಗೆ ಸರಿಮಿಗಿಲೆನಿಸುವ ಮಹಾಭಾರತವನ್ನು ರಚಿಸಿದ ಕುಮಾರವ್ಯಾಸ—ವೈಭವ

ಶಾಲಿ ಸಾಮ್ರಾಜ್ಯಕಾಲದಲ್ಲಿ ಬಾಳಿ, ಸಜೀವ ಸಚೇತನ ಭಾಷೆಯಲ್ಲಿ ಕನ್ನಡ ಭಾರತವನ್ನು ಸೃಷ್ಟಿಸಿದ ಕುಮಾರ ವ್ಯಾಸ—ಆತನ ನಚ್ಚಿನ ನುಡಿ ಯಾವುದು ?

ಇದುವೆ ತಾಯ್ನುಡಿ ವೀರ ಹುಕ್ಕಬುಕ್ಕರಿಗೆ ಅಲ್ತೆ ?

ಅತುಲ ಸಾಹಸದಿಂದ ವಿಶ್ವವಿಸ್ಮಯಕರ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ಸಕಲ ಸೌಭಾಗ್ಯದೊಂದಿಗೆ ಶತಮಾನಗಳ ವರೆಗೆ ಬಾಳುವಂತೆ ಮಾಡಿದ ವಿಜಯನಗರದ ಆ ಮಹಾವೀರರು — ಆ ಹುಕ್ಕಬುಕ್ಕರು ಆಡುವ ತಾಯಿಮಾತು ಯಾವುದು ? ಕನ್ನಡದ ಅರ್ಹತೆಯನ್ನು ಸಿದ್ಧಿಸಲು ಇದಕ್ಕೂ ಹೆಚ್ಚಿನ ಆಧಾರಗಳು ಬೇಕೆ ?

ಇಂತಹ ಕನ್ನಡವನ್ನು ಕುರಿತು ನಿಷ್ಠೆಯ, ಅಭಿಮಾನದ, ಆದರದ ಭಾವವಲ್ಲದೆ ಬೇರಾವ ಭಾವನೆಯನ್ನು ಕನ್ನಡಿಗನಾದವನು ತಾಳಿಯಾನು ?

ಆದರದೆ ಬಂದು ತಲೆವಾಗಿರಿ ಇದರ ಇದಿರಲ್ಲಿ.
ಸೋದರರೆ, ಬಂದು ತಲೆವಾಗಿರಿ ಇದರ ಇದಿರಲ್ಲಿ.

ಈ ಎರಡು ಸಾಲುಗಳು ವಿಚಾರ ಪರಿವರ್ತನದೊಂದಿಗೆ ಭಾವಾವರೋಹಣವನ್ನು ಕಲ್ಪಿಸುತ್ತ ಸ್ವಾಭಾವಿಕವಾದ ಕವನ ಸಮಾಪ್ತಿಯನ್ನು ಸಾಧಿಸುವುವು.

ಅತ್ಯಂತ ಸರಲವಾದ ಕವನವೂ ಹೇಗೆ ಪರಿಣಾಮಕಾರಿ ಆಗಬಹುದು ಎಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆ ಆಗಿದೆ. ಇಂದಿನ ಸಾಹಿತ್ಯದಲ್ಲಿ ಪ್ರಚುರವಾಗಿದ್ದ ಸಣ್ಣ ಕತೆ ಇಲ್ಲವೆ ಏಕಾಂಕನಾಟಕಗಳ ಲಾಘವ, ಏಕಾಗ್ರತೆ ಮತ್ತು ಭಾವಬಿಂಬನ ಈ ಮೂರು ಮುಖ್ಯ ಲಕ್ಷಣಗಳನ್ನು ಈ ಕವನದಲ್ಲಿ ಕಾಣಬಹುದು.

ಉಪಾಸ್ಯ ದೈವತದ ಅಪಾರ ಸದ್ಗುಣಗಳನ್ನು ಮತ್ತೆ ಮತ್ತೆ ನೆನೆದು ಕೊಂಡಾಡುವುದು, ಹಾಡಿ ನಲಿದಾಡುವುದು ಭಕ್ತಿಯ ಒಂದು ಬಗೆ. ಇಂತಹ ಸುಹೃದ್ ಭಕ್ತಿಯ ವಾಗ್ ವಿಲಾಸಕ್ಕೆ 'ತಾಯ್ನಾಡು' ಒಂದು ನಿದರ್ಶನವು. ಕನ್ನಡ ನಾಡಿನ ಪರಿಪರಿಯ ಅಂದವನ್ನು ಮನದಂದು ತಲ್ಲೀನತೆಯಿಂದ

**ಕನ್ನಡ ನಾಡಿನ ಅಲಂಪಂ ಬಣ್ಣಿಸಲು ಎನ್ನ ಅಳವೆ ?**

ಎಂದು ನಯವಾಗಿ ವಿನಯವಾಗಿ ಕವಿ ಹಾಡಲಾರಂಭಿಸುವನು. 'ಸೈಪಿಗೆ

ಕಣಿ, ಅರಕೆ ಎಡೆ, ಪನ್ನತಿಕೆಗೆ ಮನೆ, ಬಿನ್ನಣಕೆ ಓವರಿ', ಮುಂತಾಗಿ ಅದರ ಒಂದೊಂದು ಗುಣನಿಧಾನವನ್ನು ಗುಣಿಸತೊಡಗುವನು. 'ಇಷ್ಟೆ ತಾನೆ ನಿಮ್ಮ ಕನ್ನಡದ ಹೆಚ್ಚಳ ? ' ಎಂದು ಕೇಳಿದರೆ, 'ಬೇಸರವಿಲ್ಲವಷ್ಟೆ? ಪರಾಂಬರಿಸಿರಿ — ಬಿನಯಕೆ ನೆಲಂ, ಐಸಿರಿಗೆ ಆಡುಂಬೊಲಂ, ಅನು-ನಯಕೆ ಆಗರಂ, ಒಳ್ಪಿಗೆ ಚಾವಡಿ — ' ಎಂದು ಹಾಡನ್ನು ಮುಂದುವರಿಸುವನು. ' ಇನ್ನೂ ಬೇಕಾಗಿದ್ದರೆ, ಇಕೊ ಕೊಳ್ಳಿ; — ತತ್ತ್ವಜ್ಞರ–ಭಕ್ತರ–ಸಚ್ಚರಿತರ ವಸತಿಸ್ಥಳಂ, ಪರಿದೊರೆ – ತಿಳಿಗೊಳ– ಪೊಸಬನ- ಬೆಳೆವೊಲ–ನರುವೂ–ಪಾಲ್ದೆನೆ- ತನಿವಣ್ಗಳಿಂ ಅನವರತಂ ಮೆರೆವುದು; ಸಿರಿ- ಸಂಪತ್ತು– ನೀತಿ–ಸಂಸ್ಕೃತಿ-ವಿದ್ಯೆ-ಕಲೆ ಸರ್ವ ಸಾಧನಗಳಿಂದ ಸಮೃದ್ಧವಾದುದು; ಅದು ಸಿರಿಗನ್ನಡ ನಾಡು; ತಿರೆಯೊಳಗೆ ಪೆರತು ಆವುದು ಕನ್ನಡ ನಾಡಿಗೆ ದೊರೆ ಇರ್ಪುದು ? ' ಎಂದು ವಿವರವಾಗಿ ವಿವೇಚಿಸುವನು. ಇಂತಹ ತಾಯಿಯ ಮಗು, 'ಅಳ್ತಿಯ ತಾಯ್ನಾಡಿ'ನ ಕಂದ ತಾನಾದುದಕ್ಕೆ ಹಿರಿ ಹಿರಿ ಹಿಗ್ಗಿ,

ಎನಿತೊಂದು ಎನ್ನಯ ಪೂರ್ವದ ಸುಕೃತಮೊ !

ಎಂದುಕೊಳ್ಳುತ್ತ ವಿಸ್ಮಯಾನಂದ ಭಾವದಲ್ಲಿ ನಿಮಗ್ನನಾಗುವನು !

ತನ್ಮಯತೆಯಿಂದ ತಾಳಲಯಗಳನ್ನು ಹಿಡಿದು ಸುಸ್ವರವಾಗಿ ಹಾಡುತ್ತ ಕುಣಿಯುವ ವಿವಶ ಭಜಕನ ಚಿತ್ತಾಪಹಾರಿ ಆಕೃತಿಯೊಂದು ಮರ್ಮವರಿತು ಈ ಗೀತವನ್ನು ಓದುವವರ ಬಗೆದೆರೆಯ ಮೇಲೆ ಸುಳಿದಾಡುವುದು. ಈ ಚಮತ್ಕೃತಿಯ ಕೆಲವೊಂದು ಶ್ರೇಯಸ್ಸು ಔಚಿತ್ಯವರಿತು ಚತುರತೆಯಿಂದ ಬಳಸಿದ ಇದರ ನರ್ತನಗತಿಯ ಪರಿವರ್ಧಿನಿ ಷಟ್ಪದೀ ವೃತ್ತಕ್ಕೆ ಸಲ್ಲುವುದಾಗಿದೆ. ಇದೇ ವಿಧವಾದ ಭಾವವು ಸೌಮ್ಯವಾಗಿ ಶಾಂತವಾಗಿ ತಿಳಿಯಾಗಿ 'ಭರತಭೂಮಿ' ಮತ್ತು 'ಹಂಬಲು' ಈ ಕವನಗಳನ್ನು ರಂಜಿಸುವುದಾಗಿದೆ. ' ವಿಜಯದುಂದುಭಿ 'ಯ ಮೊಳಗಿನಲ್ಲಿ ದುಂದುಭಿ ಘೋಷದ ಉತ್ತಾನತೆ ಇದೆ. ಬಿರುಗಡಲ ಉಗ್ರತೆ, ಸಿಡಿಲಿನ ದುಡುಕು, ಗುಡುಗಿನ ಅಬ್ಬರ, ಜಯಭೇರಿಯ ಉದ್ರೇಕ ಇವುಗಳನ್ನು ಒಂದೊಂದಾಗಿಯೂ ಒಟ್ಟಾಗಿಯೂ ಇಲ್ಲಿ ಅನುಭವಿಸಬಹುದು.

ಇಲ್ಲಿಯ ವಿಚಾರದಲ್ಲಿಯೂ ಅದನ್ನು ಪ್ರತಿಬಿಂಬಿಸುವ ಪದಪ್ರಚಾರದಲ್ಲಿಯೂ ಸಾರಗ್ರಾಹಿತೆ ಮತ್ತು ಶಕ್ತಿಸಂಪನ್ನತೆ ಮೈಗೂಡಿಕೊಂಡಿವೆ. ರಾಷ್ಟ್ರೀಯ ಭೂಮಿಕೆಯಿಂದ ವಿಜಯನಗರ ಸಾಮ್ರಾಜ್ಯದ ಉಜ್ವಲ ಚರಿತ್ರೆಯನ್ನು ಸಿಂಹಾವಲೋಕನಪೂರ್ವಕವಾಗಿ ವಿಮರ್ಶಿಸಿ ಅದರ ಜೀವನದ ಮಹಾರಹಸ್ಯವನ್ನು ಸೂತ್ರರೂಪವಾಗಿ ಇದರಲ್ಲಿ ನಿವೇದಿಸಿದೆ. ಈ ವೀರ ಗೀತವನ್ನು ಎರಡು ಭಾಗವಾಗಿ ವಿಂಗಡಿಸಿ ಮೊದಲಿನದರಲ್ಲಿ (ಮೂರು ಪದ್ಯಗಳು) ವಿಜಯನಗರ ಸ್ಥಾಪನೆಯ ಪೂರ್ವ, ದೇಶದಲ್ಲಿ ಉದ್ಭವಿಸಿದ ದಾರುಣ ರಾಷ್ಟ್ರನೈತಿಕ ಅಧಃಪತನವನ್ನು, ಎರಡನೆಯದರಲ್ಲಿ ಆಮೇಲಿನ ಜನಾಂಗಿಕ ಪ್ರಚಂಡ ಪುನರುತ್ಥಾನವನ್ನು ಪ್ರದೀಪ್ತ ಶೈಲಿಯಲ್ಲಿ ನಿರೂಪಿಸಿದೆ ಎಂಬುದನ್ನು ಪರಾಮರ್ಶಿಸಬೇಕು. ಉರಿಯಂತೆ ಉರಿದುರಿದು ಹರಿದು ಬರುವ ಹಗೆಯ ದಾಳಿಯ ಉಗ್ರತೆಯ ಸೂಚನೆಯೆ ಈ ದುಂದುಭಿಯ ಈ ಆರಂಭನಿನಾದವು.

ನಾಲಗೆಗಳಂ ನೀಡಿ ಭುಗಿಲ್ ಎನುತೆ ಉರಿಯುತುಂ
ಆಳವಿನೊಳ್ ಬಂದುದಂ ತನ್ನ ಒಡಲೊಳ್ ಇರಿಸುತುಂ,
ನಾಡನು ಬೇಯಿಸುತೆ ಮಸಣಂ ಆಗಿಸುತೆ,
ಕರ್ವೊಗೆಯನು ಎತ್ತಲುಂ ತೂರುತುಂ
ಅಕಟಾ ಬೇಗೆ ಬಲಿದು ಪರಿದತ್ತು !

ಈ ಬೇಗೆಯಿಂದ ನಾಡಿನ ಸಿರಿ ಕಳಚಿತು; ಕಳೆ ಕಮರಿತು;

ಉತ್ಸವಂ ಮುರುಟಿದತ್ತು ! ಸಂಪದಂ ಕಂದಿದುದು !
ಹಾಹಾರವಂ ಒಗೆಯೆ ಜೀವಲತೆ ಬರಡಾಯ್ತು,
ಭಾಗ್ಯದ ಏಳ್ಗೆ ಬಯಲಾಯ್ತು !

ರಾಷ್ಟ್ರದ ಸೌಭಾಗ್ಯನಾಶವೇನು ಸಾಮಾನ್ಯಹಾನಿ ಅಲ್ಲ. ಆದರೆ ಮೊದಲು ಸಾಮರ್ಥ್ಯ ಹೋಗುವುದು ಆ ಮೇಲೆ ಸ್ವಾತಂತ್ರ್ಯ ಹೋಗುವುದು ಎನ್ನುವಂತೆ ರಾಷ್ಟ್ರೀಯ ಸತ್ತ್ವಾಪಕರ್ಷವು ಈ ಭೌತಿಕ ಹಾನಿಗಿಂತ ಭೀಕರತರವಾದುದು. ಈ ಆತ್ಮಿಕ ಅವನತಿಯೆ ಜನಾಂಗದ ಅಧಃಪತನದ ಮೂಲವು.

ಜನಂ..................ನಡುಗುತುಂ
ಅರಿವಳಿದು ಮುಂದುಗಾಣದೆ ನವೋ ಎಂದುದೈ !
ಪಿಂತು ಅಭಿಮಾನಮೂರ್ತಿ ಆಗಿರ್ದುದಂ ಮರೆತು ಬಾಗಿರಲ್
ಬಗೆದಂದುದು !

ಎಲ, ಏನಿದು! ತಾವು ನಿನ್ನೆ ನಿನ್ನೆಯೆ ನರಪತಿಗಳಾಗಿ ಲೋಕವನ್ನು ಪಾಲಿಸುತ್ತಿದ್ದುದು, ಜನನಾಯಕರಾಗಿ ರಾಷ್ಟ್ರವನ್ನು ಆಳುತ್ತಿದ್ದುದು, ಇದೆಲ್ಲವನ್ನು ಮರೆತು ಇವರು ಪರರ ಪದಹತಿಯಿಂದ ಪದಭ್ರಷ್ಟರಾಗಿ ಉರುಳಾಡುತಿರುವರಲ್ಲ! ಇದರ ನೆಲೆಯೇನು ? ಸ್ವಾರ್ಥ, ಹೇಯ ಸ್ವಾರ್ಥ. ಮಾನವ ಸಂಸ್ಕೃತಿಯ ಏಳು ಬೀಳುಗಳ ಚರಿತೆ ಒಂದು ಮಾತಿನಲ್ಲಿ ರಚಿತ ವಾಗಿದೆ. 'ಬದುಕು', ಎಂದಾದರೂ ತೊಲಗಲಾರದ ಆ ಸಾವಿಗೆ ಅಂಜಿ. ಬರಿಯ ಬದುಕಿನ ಬೆನ್ನು ಹತ್ತಿದವನ ಬಾಳು ಬದುಕಿಯೂ ಸತ್ತಂತೆಯೆ. ಇಂತಹ ಜೀವಗಳ್ಳರು ಇವರು. ಜೀವನರಣದ ಈ ಹೇಡಿಗಳು

ಪಂದೆಗಳ್ ಮರಣಕೆ ಅಂಜಿದರ್ ಅಲ್ತೆ ?
ಪಣೆಗೆ ಮಣ್ ತೊಡೆಯಲ್ಕೆ ಪೇಸರ್ ಅಲ್ತೆ ?
ಅಕಟ ಬದುಕಲ್ ಎಳಸಿದರ್!
ಅಕಟ ಪಲ್ಗಳೊಳ್ ಪುಲ್‌ಗಚ್ಚಿ ಬದುಕಲ್ ಎಳಸಿದರ್ !!
ಧರ್ಮಮಂ ಸಂಸ್ಕೃತಿಯಂ ಆತ್ಮಮಂ ರಿಪುಗೆ ಮಾರಿ
ನೀನೆ ಶರಣ್ ಎಂದು ಬದುಕಲ್ ಎಳಸಿದರ್ ಅಕಟ !!!

ಇದಕ್ಕೂ ಹೆಚ್ಚಿನ ನಾಚಿಕೆ ಯಾವುದು? ದೈನ್ಯವಾವುದು? ರಾಷ್ಟ್ರೀಯ ದುರವಸ್ಥೆ ಯಾವುದು ?

ಇದನುಳಿದು ಇನ್ನು ಇಂತು ಪೆರತು ದುರ್ಭಾಗ್ಯಂ ಆವುದು ?

ಈ ಆಘಾತದಿಂದ ಆಸೇತುಹಿಮಾಚಲ ಅಖಿಲ ದೇಶವು ಗಡ ಗಡನೆ ನಡುಗಿತು. ಉತ್ತರ ಭಾರತದ ಕಾಶ್ಮೀರ, ಪಂಜಾಬ, ಸಿಂಧ, ಗುಜರಾತ, ಬಂಗಾಲ, ಬಿಹಾರ ಮೊದಲಾದ ಪ್ರಾಂತ್ಯಗಳು ಎಂದೋ ಪಾದಾಕ್ರಾಂತವಾಗಿ ಹೋದುವು. ದಕ್ಷಿಣ ಭಾರತಕ್ಕೆ ಸೇರಿದ ಮಹಾರಾಷ್ಟ್ರ, ಆಂಧ್ರ, ತಮಿಲ ರಾಜ್ಯಗಳು ಅಸ್ತವ್ಯಸ್ತವಾದುವು. ಇವುಗಳ ಸಾಲಿಗೆ ಕರ್ನಾಟಕವೂ ಸೇರಿತು. ಆದರೆ ಅದು ಹಾಗೆ ಸೇರಿ ಬಹುಕಾಲ ಸ್ಥೈರಿಸ

ಲಿಲ್ಲ. ಸಂಘರ್ಷವು ಜ್ವಾಲಾಗ್ರಾಹಿ ಪದಾರ್ಥವನ್ನು ಸ್ಫೋಟಗೊಳಿಸುವಂತೆ ಪಾರತಂತ್ರ್ಯಪಾಶದ ಸ್ಪರ್ಶವು ಕನ್ನಡಿಗರ ಸುಪ್ತ ಅಂತಃಶಕ್ತಿಯನ್ನು ಸ್ಫುರಣಗೊಳಿಸಿತು. ಕರ್ನಾಟಕದ ಪರಂಪರೆಗೆ ಅನುಗುಣವಾಗಿ ಧರ್ಮವೇ ಈ ನೂತನ ಜಾಗೃತಿಗೆ ಪ್ರೇರಣೆ ನೀಡಿತು. ಜನಾಂಗದಲ್ಲಿ ಓತಪ್ರೋತವಾದ ಈ ತೇಜಸ್ಸು ಅರಿಯ ಆರ್ಭಟೆಯನ್ನು ಅಡಗಿಸಿತು; ಸ್ವರಾಜ್ಯದ ಉದ್ದಂಡ ಧ್ವಜವನ್ನು ಸ್ಥಿರವಾಗಿ ಊರಿಸಿತು.

ನಾಡೊಳ್ ಎಲ್ಲಿಯುಂ ಚೈತನ್ಯಂ ಏಂ ಸ್ಫುರಿಸಿದುದೊ!
ದೌರ್ಬಲ್ಯಂ ಅಳಿದತ್ತು; ವೀರರಸಂ ಉರ್ಕಿದತ್ತು.
ಕರುನಾಡ ಚೆನ್ನಿಗರ ಹೃದಯದೊಳ್
ಸದಭಿಮಾನಜ್ಯೋತಿ ಉಜ್ವಲಂ ಬೆಳಗಿದತ್ತು !

ಇಂತಹ ಉಜ್ವಲವಾದ, ಊರ್ಜಸ್ವಲವಾದ, ಪವಿತ್ರವಾದ, ಆತ್ಮಾರ್ಪಣ ಪ್ರತಿಜ್ಞಾತವಾದ ಉತ್ತುಂಗ ರಾಷ್ಟ್ರೀಯ ಸಾಹಸಧೀರರನ್ನು ಪ್ರತಿಭಟಿಸುವ ಪುರುಷರಾರು ?

ಅವರ್ಗೆ ಇದಿರ್ ಆರ್ ? ವಜ್ರಮುಷ್ಟಿಗಳ್ಗೆ ಜಗದೊಳ್
ಆರ್ ಇದಿರ್ ? ಕರುನಾಡಿನ ಉಜ್ಜ್ವಲತ್ತೇಜಕೆ
ಆರ್ ಇದಿರೊ ? ಪುಣ್ಯಕ್ಕೆ ಇದಿರೆ ?............
ಉದಯೋನ್ಮುಖರ್ಗೆ ಆರೊ ಇದಿರ್ ?

ಈ ವಿಧದ ಆಂದೋಲನದ ಫಲವಾಗಿ ವಿಜಯನಗರವು ಹುಟ್ಟಿತು. ತನಗಾಗಿ ಹುಟ್ಟಿತೆ ? ತನ್ನವರಿಗಾಗಿ ಹುಟ್ಟಿತು. ತನ್ನ ನಾಡಿಗಾಗಿ ಬಾಳಿತು. ತನ್ನ ಜನಾಂಗದ ಬದುಕನ್ನು ಸಾರ್ಥಕಗೊಳಿಸಿತು. ವಿಜಯನಗರವು ನಿಜವಾಗಿ ವಿಜಯನಗರವಾಯಿತು. ಇದು ಮೊಳಗಿದ ದುಂದುಭಿ ನೈಜ ವಿಜಯದುಂದುಭಿ ಆಯಿತು. ಕನ್ನಡಿಗರ ಈ ಶತಕೃತ್ಯವು ಸ್ತೋತ್ರಾರ್ಹವಾಗಿದೆ; ಕನ್ನಡಿಗರ ಈ ಪುರುಷಾರ್ಥವು ಪ್ರಶಂಸನೀಯವಾಗಿದೆ. ಅಂದಿನ ಕನ್ನಡಿಗರ ಈ ಸ್ವಾಭಿಮಾನವು ಲೋಕದ ಚಿರಂತನ ಆದರ್ಶವಾಗಿದೆ.

................ವಿಜಯದುಂದುಭಿಯ ನಿಸ್ವನಂ
ಪರಿದತ್ತು ದೆಸೆಗಳೊಳ್, ವಿಜಯನಗರದ ಜಯಧ್ವಜಂ
ಉಚ್ಛ್ರಿತಂ ಮಿಳಿರುತೆ

ಮೊರೆದತ್ತು. ಕರುನಾಡಿನ ಊರ್ಜಸ್ವಲಂ ಯಶಂ
ಸುರುಚಿರಂ ದಿಕ್ಕನ್ಯೆಯರ ಮುಖಂಗಳ್ಗೆ ಅದೇಂ
ಮಿರುಗಂ ಇತ್ತುದೊ! ನಮೋ ಸ್ವಾಭಿಮಾನಜ್ಯೋತಿ!
ನೀಂ ಪರಾತ್ಪರ ಶಕ್ತಿಯೈ!!

ಈ ಪರಿಯ ಸ್ವಾಭಿಮಾನದ ಸತ್ತ್ವಾತಿಶಯದ ಸಾರಸ್ವರೂಪದ ಸಕಲ ವಿಗ್ರಹವೇ 'ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ' ಈ ಕವನದಲ್ಲಿ ಎರಕಗೊಂಡಿದೆ. ಆತ್ಮೋಪನಿಷತ್ತಿನ ಮಹಾವಾಕ್ಯವಿದು; ಸ್ವಾಭಿಮಾನ ವೇದಾಂತದ ಆದಿ ಸೂತ್ರ ಇದು. 'ಅಲ್ಪಾಕ್ಷರಂ ಅಸಂದಿಗ್ಧಂ, ಸಾರವತ್, ವಿಶ್ವತೋಮುಖಂ' ಎಂಬ ಸೂತ್ರದ ಸಮಸ್ತ ಲಕ್ಷಣಗಳಿಂದ ಇದನ್ನು ಪರಿಕಿಸಿ ನೋಡಬೇಕು. ಈ ವರೆಗೆ ಹಾಡಿದುದೆಲ್ಲ, ಇಷ್ಟು ಹೊತ್ತು ಹೇಳಿದುದೆಲ್ಲ ಇದನ್ನು ಆಧರಿಸಿದ ಮಹಾಭಾಷ್ಯದ ವಾಗ್ವಿಸ್ತಾರ ಮಾತ್ರ. ಬಾಲಕೃಷ್ಣನ ಬಾಯಿಯಲ್ಲಿ ವಿಶ್ವರೂಪವನ್ನು ಕಂಡಂತೆ ಈ ಒಂದು ಕವನಗರ್ಭದಲ್ಲಿ ರಾಷ್ಟ್ರಭಾವನೆಯ ವಿರಾಟ್ ವಿಭೂತಿಯನ್ನು ಸಾಕ್ಷಾತ್ಕರಿಸಬಹುದಾಗಿದೆ.

ಕನ್ನಡದ ನೆಲದ ಪುಲ್ ಎನಗೆ ಪಾವನತುಲಸಿ!
ಕನ್ನಡದ ನೆಲದ ನೀರ್ವೊನಲ್ ಎನಗೆ ದೇವನದಿ!
ಕನ್ನಡದ ನೆಲದ ಕಲ್ ಎನಗೆ ಶಾಲಗ್ರಾಮ ಶಿಲೆ!

ಎಷ್ಟು ಸರಲವು ಅಷ್ಟು ಉಜ್ವಲವು, ಎಷ್ಟು ಉಜ್ವಲವು ಅಷ್ಟು ಉತ್ಕಟವು, ಅಷ್ಟು ಪರಿಶುದ್ಧವು. ಪರಿಶುದ್ಧವಾದ ಪವಿತ್ರವಾದ, ಮಂಗಲವಾದ, ಮಂಗಲಗಳಿಗೆ ಮಂಗಲವಾದ ಕನ್ನಡದ ದಿವ್ಯ ದೇದೀಪ್ಯಮಾನ ವಿಭೂತಿಯನ್ನು ಸಾಮಾನ್ಯ ಲೌಕಿಕ ಶಬ್ದಗಳಿಂದ ಸ್ಪರ್ಶಿಸುವುದು ಪಾಪ ಎಂಬ ಭಾವನೆಯಿಂದ ಪ್ರೇರಿತನಾದಂತೆ ಕವಿ ಇಲ್ಲಿ ಬಳಸುವ ಮಾತುಗಳೆಲ್ಲ ಶುಚಿಯಾಗಿವೆ, ಭಾವಪೂತವಾಗಿವೆ.

ಕನ್ನಡಂ ದೈವಮೈ!

ಕನ್ನಡವು ಒಂದುಭಾಷೆ ಅಲ್ಲ; ಒಂದು ಸಾಹಿತ್ಯವಲ್ಲ; ಒಂದು ರಾಷ್ಟ್ರವಲ್ಲ; ಅದು ದೈವತವು. ಈ ದೇವತೆಯ ಆರಾಧನದಲ್ಲಿ ನಿರತನಾದ ಅರ್ಚಕನ ಪೂಜಾ ದ್ರವ್ಯಗಳು ಕನ್ನಡ ಹುಲ್ ಎಂಬ ತುಲಸಿ ಕನ್ನಡ ನೀರ್ ಎಂಬ

ಗಂಗಾಜಲ, ಕನ್ನಡ ಕಲ್ ಎಂಬ ಶಾಲಗ್ರಾಮ. ಆತನು ಜಪಿಸುವ ಮಹಾವರ್ಣವು ಕನ್ನಡ ಶಬ್ದವೆಂಬ ಓಂಕಾರ. ಶ್ರದ್ಧೆಯಿಂದ ಪುರಶ್ಚರಣ ಪೂರ್ವಕವಾಗಿ ಪಠಿಸಿ ಅಮಿತ ಸಿದ್ಧಿಯನ್ನು ಪಡೆವುದಾದ ಕನ್ನಡ ನುಡಿ ಆತನ ಅದ್ಭುತ ಗಾಯತ್ರೀ ಮಂತ್ರ! ತಪ್ತಲೋಹವು ಅತಿ ತಪ್ತವಾಗಿ ಧವಲ ಕಾಂತಿಯನ್ನು ತಳೆವಂತೆ ಸ್ವಾಭಿಮಾನವಹ್ನಿಯ ಈ ಆತ್ಯಂತಿಕ ಪ್ರಜ್ವಲಿತ ದಸೆಯಲ್ಲಿ ವರ್ಣರಾಗರಂಜಿತ ರೂಪಭೇದಗಳ ಸಂಕುಚಿತ ತಾರತಮ್ಯ ದರ್ಶನಕ್ಕೆ ಎಡೆಯಿಲ್ಲ. ಇಂತಹ ಈ ಭಾವ ನಿರ್ಭರ ಸಮಾಧಿ ಯೋಗವನ್ನು ಕಾವ್ಯವೇದಾಂತದ ಭಾವಾದ್ವೈತ ಇಲ್ಲವೆ ಅದ್ವೈತಸಿದ್ಧಿ ಎಂದು ಹೆಸರಿಸಬಹುದು. ಕೊನೆಗೆ ಈ ರಾಷ್ಟ್ರಯೋಗಿ

ಇನ್ನಾವುದೈ ಪೆರತು ಕನ್ನಡದ ಸೇವೆಯಿಂದೆ
ಅಧಿಕಂ ಈ ಜಗದೊಳ್ ಎನಗೆ?

ಎಂಬ ಪ್ರತಿಜ್ಞಾವಚನವನ್ನು ಪುನರುಚ್ಚಾರಣ ಮಾಡಿ ರಾಷ್ಟ್ರದೇವಿಯ ಈ ಅಪೂರ್ವ ಔಪಾಸನ ಸಮಾರಂಭವನ್ನು ಸಾಂಗಗೊಳಿಸುವನು.

## ೧೧ ಸಂಕೀರ್ಣ ಕವನಗಳು. (ಅಲ್ಲಿ ಇಲ್ಲಿ)

'ಕವಿ ಮತ್ತು ಬನದೇವಿ' ಈ ಕವನವು ಕಾವ್ಯ ಮತ್ತು ನಿಸರ್ಗ ಇವುಗಳ ಅನ್ಯೋನ್ಯ ಸಾಹಚರ್ಯವನ್ನು ಪ್ರತೀಕಪರವಾಗಿ (personification) ಚಿತ್ರಿಸುವುದು. ಸೃಷ್ಟಿಯ ಸುರಮ್ಯ ಸಂವಿಧಾನದಿಂದ ಸ್ಫುರಣ ಗೊಂಡ ಕವಿ ತಾನೇ ತಾನಾಗಿ ಹಾಡುತ ಕವನದ ಕಾಣಿಕೆಯನ್ನು ಬೀರು ವನು. ಆತನ ದನಿಗೆ ಎಲ್ಲೆಲ್ಲಿಯೂ ಮಾರ್ದನಿಗೊಡುತ್ತ ಮೈವೆತ್ತು ಬನದೇವಿ ಎದ್ದು ಬರುವಳು; ಆನಂದಪೂರಿತೆಯಾಗಿ ಕವಿಯನ್ನು ಆದರಿಸು ವಳು! ಕವಿ ದೊಡ್ಡವನೋ ಪ್ರಕೃತಿ ದೊಡ್ಡವಳೊ? ಕವಿಗೆ ಶಾಂತಿ ತುಷ್ಟಿ ಸ್ಫೂರ್ತಿಗಳನ್ನು ದಯಪಾಲಿಸುವ ಪ್ರಕೃತಿದೇವಿ ಹಿರಿಯಳಾದರೆ, ಪ್ರಕೃತಿಯ ನಿಗೂಢ ಶಕ್ತಿಯ ಆಳವನ್ನು ಅನುಭವಿಸಿ ಆ ಆ ಸೂಕ್ಷ್ಮ ಸಂನಿವೇಶ ಗಳೊಂದಿಗೆ ಆತ್ಮೀಯತೆಯಿಂದ ಸಮರಸನಾಗಿ ಅವಳಲ್ಲಿ ಹೆಚ್ಚಿನ ಚೈತನ್ಯ ಸೊಗಸುಗಳನ್ನು ಪ್ರಕಾಶಗೊಳಿಸುವ 'ಅಮೃತವಾಕ್' ಕವಿ ಹೆಚ್ಚಿನವ

ನಲ್ಲವೆ? ಈ ಪರಿಯಿಂದ ಕವಿ ಮತ್ತು ಪ್ರಕೃತಿದೇವಿಯನ್ನು ಒಂದೆಡೆಗೆ ಸೇರಿಸಿ ನಿಸರ್ಗದ ರಾಮಣೀಯಕವನ್ನು ಮತ್ತು ಕವಿಯ ಘನತೆಯನ್ನು ನಯವಾಗಿ ಸಾರಯುತವಾಗಿ ಮಾರ್ಮಿಕವಾಗಿ ಪ್ರತಿಪಾದಿಸುವ ಈ ಕವನದ ವಿಧಾನವು ನವ್ಯತೆಯಿಂದ ಬೆಳಗಿದೆ.

ಗೀತಗಳಲ್ಲಿ ರೂಪಕಗೀತಗಳ (symbolistic poems) ಅದೊಂದು ಕಾಂತಿ ಮಿಗಿಲಾದುದು. ವರ್ಣಿಸಲಿರುವ ವಸ್ತುವಿನ ರೂಪದೊಡನೆ ಬೇರೊಂದು ಸುಪ್ರಸಿದ್ಧ ವಸ್ತುವಿನ ಪ್ರತಿರೂಪವನ್ನು ತಾದಾತ್ಮ್ಯವಾಗಿ ಸ್ಥಾಪಿಸಿ ನಿರೂಪಿಸುವುದು ಅವುಗಳ ರೀತಿ. ಈ ವಿಧದ ನಿರೂಪಣದಲ್ಲಿ ಪ್ರತಿರೂಪದ (model) ರೂಪಪ್ರಭಾವದಿಂದ ಮೂಲರೂಪದ ರೂಪ ಸಂಪತ್ತಿ ವೃದ್ಧಿಯಾಗಿ ವಿರಾಜಿಸುವುದು.

ಇಂತಹ ರೂಪಕಗೀತಗಳಲ್ಲಿ 'ಮುದ್ದಣ' ಈ ಕವನವು ಪ್ರಶಸ್ತಿಯನ್ನು ಪಡೆಯತಕ್ಕುದು. ಸಮಸ್ತರೂಪಕವಾಗಿ ರೂಪುಗೊಂಡ ಪ್ರತೀಕ ಕವನವಿದು (allegory). ಇದರ ಸ್ವಾದುತೆ ಆಸ್ವಾದನೀಯವಾಗಿದೆ. ಮೊದಲಿನ ಎರಡು ಪದ್ಯಗಳು ಕಷ್ಟಮಯವಾದ ಮಾನವ ಜೀವನವನ್ನು ಮತ್ತು ಇಂತಹ ಜೀವನದಲ್ಲಿ ಶಾಂತಿ ಸಮಾಧಾನಗಳ ಒಂದು ಆಧಾರ ಸ್ಥಾನವಾದ ಸಾಹಿತ್ಯದ ಪರಿಯನ್ನು ಸೂಚಿಸುವುವು ಎಂದು ಇಟ್ಟುಕೊಳ್ಳಬಹುದು. ಶತಮಾನಗಳ ವರೆಗೆ ಸರಸತಿಯ ನಂದನವನವಾಗಿ ಚಿಗಿತು ಪೂತು ಕಾತು ಶೋಭಿವೆತ್ತು ಅವಿರತವಾಗಿ ಸರಸ ಕೃತಿಗಳನ್ನು ಸೃಜಿಸಿದ ಕನ್ನಡ ಸಾಹಿತ್ಯವು ಕಳೆದ ಒಂದೆರಡು ಶತಮಾನಗಳಲ್ಲಿ ಬಂಜೆಯಾಯಿತು. ಮೂರನೆಯ ಪದ್ಯದಲ್ಲಿ ವರ್ಣಿತವಾದ ಹಾಳತೋಟವಿದು.

ಈ ಹೀನಸ್ಥಿತಿಯಲ್ಲಿ ಒಂದು ಆಶಾಂಕುರವು ತೋರಿತು. ದಕ್ಷಿಣ ಕನ್ನಡ ಜಿಲ್ಲೆ ನಿಸರ್ಗದ ನೆಲೆವೀಡು. ಇಲ್ಲಿ ವರಕವಿಯೊಬ್ಬನು ಉದಯಿಸಿ ಕನ್ನಡದ ದೈನ್ಯವನ್ನು ಹಿಂಗಿಸುವನು (೪ನೆಯ ಪದ್ಯ). ಮುದ್ದಣನ ಅಸಾಮಾನ್ಯ ಪ್ರತಿಭೆಯನ್ನು ಆತನು ತನ್ನ ಕೃತಿಗಳಿಂದ ಕನ್ನಡ ಸಾರಸ್ವತ ಪ್ರಪಂಚಕ್ಕೆ ನೀಡಿದ ಸಂಪದಭ್ಯುದಯವನ್ನು ಆಳವಾಗಿ ಮನಗಂಡವರು ಮುಂದಿನ ಎರಡು ಪದ್ಯಗಳಲ್ಲಿ (೫-೬) ಚಿತ್ರಿತವಾದ ಕಾವ್ಯಸೃಷ್ಟಿಯ ಅದ್ಭುತ ಚಮತ್ಕಾರವು ಸತ್ಯವೆಂದು ಸ್ವೀಕರಿಸದಿರಲಾರರು. ಈ

ವಾದರಿಯು ಹಲವು ಗರ್ಭಿತಾರ್ಥಗಳಿಂದ ಈ ಕವನವು ಪುಷ್ಟಿಗೊಂಡಿದೆ. ಮುದ್ದಣನ ಮೂರು ಕೃತಿಗಳನ್ನು (ಅದ್ಭುತ ರಾಮಾಯಣ, ರಾಮಾಶ್ವಮೇಧ, ಶ್ರೀರಾಮಪಟ್ಟಾಭಿಷೇಕ), ಅವುಗಳ ವಸ್ತುವನ್ನು, ಅದನ್ನು ಪ್ರತಿಪಾದಿಸುವ ಆತನ ವಿಲಕ್ಷಣ ಶಕ್ತಿಯನ್ನು ಅರಿತವರು ಮಾತ್ರ,

ಚೆಂದಳಿರ ತೋಂಗಲಲ್ಲಿ
ಕಿರುವಯ್ಯ ಚೆಲ್ವ ಕೋಗಿಲೆಯೊಂದು ನಿಂದು ನಲ್
ಸರದಿಂದೆ ಮೂರು ಸೊಳ್ ಶ್ರೀರಾಮ ಎಂದುಲಿದೊ
ಡರಚಣದೊಳಾತೋಂಟದೆಡೆಯೆಡೆಯ ಗಿಡುಬಳ್ಳಿ ತಳಿರಿಡಿದು
ಸೊಂಪೆಸೆದುದು

ಎಂಬೀ ವಿಧದ ಶಬ್ದಚಿತ್ರಗಳ ಅಭಿಪ್ರಾಯಗಾಂಭೀರ್ಯವನ್ನು ಗ್ರಹಿಸ ಬಲ್ಲರು.

'ನೀರಗುಳ್ಳಿ' 'ಅಡವಿ', 'ಆಲದ ಮರದಡಿಯಲ್ಲಿ', 'ಹುಳು' ಈ ಕವನಗಳು ಇದೇ ಬಳಗಕ್ಕೆ ಸೇರತಕ್ಕುವು. ಸರಲತೆ, ತಾಲಬದ್ಧತೆ ಮತ್ತು ಭಾವಲಾಲಿತ್ಯ ಈ ಗುಣಗಳ ಮೂಲಕ 'ನೀರಗುಳ್ಳಿ'ಯ ಮನೋಹಾರಿತೆ ಮಿಗಿಲಾಗಿದೆ. ಉಚಿತ ಪದಧ್ವನಿಯೋಜನೆಯಿಂದ ವರ್ಣ್ಯ ವಸ್ತುವನ್ನು ರೂಪವತ್ತಾಗಿ ತಂದು ನಿಲ್ಲಿಸುವ ಕವಿಯ ಚಿತ್ರರಚನಾಚಾತುರ್ಯವನ್ನು ಈ ಗೀತದಲ್ಲಿಯೂ ಆಲಿಸಬೇಕು. 'ಆಲದ ಮರದಡಿಯಲ್ಲಿ' ಈ ಕವನವು

ಪೊಡವಿಯಿಂ ಒಗೆದ ಒಡವೊಗಳ್ ಎಂತಿರ್ದೊಡಂ... ....ಇಂತು
ಪೊಡವಿಯ ಮುಡಿಲೊಳ್ ಕೊನೆಗೊಂದು ದಿನಂ
ಪುಡಿಗೂಡುತುಂ ಎಡೆಮಾಡುವುವ್ವೆ ಪೊಸ
ಒಡವೊಗೆ

ಎಂಬೀ ವಿಧದ ತಾತ್ತ್ವಿಕೋಕ್ತಿಗಳಿಂದಲೂ

ಉದುರ್ವುವು ಪಣ್ಣೆಲೆಗಳೊ ಕಾಲವಿಹಂ
ಗದರೆಂಕೆಯ ಪಳದುಪ್ಪುಳ್ಗಳೊ ?

ಮುಂತಾದ ಉತ್ಪ್ರೇಕ್ಷೆಗಳ ಮೇಲೆ ಆರೂಢವಾದ

ಜಗಮಿದು ಕಾಲನ ರೂಪು ಗಡಾ !

ಎಂಬ ರೂಪಕದಿಂದಲೂ ಆಕರ್ಷಕವಾಗಿದೆ.

ಸಂಗೀತದ ವಿಷಯದಲ್ಲಿ ಕವಿಗಿರುವ ಮಮತೆಗೆ ಪ್ರತ್ಯಕ್ಷವಾಗಿ 'ಸಂಗೀತ', 'ಇಂಚರ', 'ವೀಣೆಯ ತಂತಿ', 'ಸಂಗೀತದ ಚೆಲ್ವು', 'ಒಂದು ಹಾಡು' ಈ ಕವನಗಳೂ, ಅಪ್ರತ್ಯಕ್ಷವಾಗಿ ಸಂಗೀತಗಂಧಿಯಾದ ಆತನ ಇಡಿಯ ಕವನಪ್ರಪಂಚವೂ ಸಾಕ್ಷಿಯಾಗಿವೆ.

ಪವಿತ್ರ ಆದರ್ಶಜೀವನಕ್ಕಾಗಿ ಹಂಬಲಿಸುವ ಕವಿಹೃದಯವು 'ಮನಃ ಪಾವಿತ್ರ್ಯ' ಮತ್ತು 'ನೈರ್ಮಲ್ಯ' ಈ ಗೀತಗಳಲ್ಲಿ ಪ್ರತಿಬಿಂಬಿತವಾಗಿದೆ. 'ಮಳ್ಳಿ' ಈ ಕವನದಲ್ಲಿಯ ಕಲ್ಪನಾವಿಲಾಸವು ಕೌತುಕಾಸ್ಪದವಾದುದು.

## ೧೨ ಅಭಿಸಾರ

ಇದು ಸ್ವತಂತ್ರ ರೀತಿಯಲ್ಲಿ ಬರೆದ ಕಥಾಕವನವು. ವಿಷಯಸ್ವಾನ್ಯ, ನಿರೂಪಣವೈಖರಿ, ಆತ್ಮೀಯ ವಿವೇಚನೆ, ಅಕೃತ್ರಿಮ ರಚನೆ ಇವುಗಳ ಮೂಲಕ ಸ್ವತಂತ್ರಕೃತಿ ಎನಿಸುವಂತಿದೆ. ಕವೀಂದ್ರ ರವೀಂದ್ರರ ಒಂದು ಆಖ್ಯಾನವು ಇದರ ಅವಲಂಬನವೆಂದು ತಿಳಿಸಬೇಕಾದುದು. ಈ ಕವನದಲ್ಲಿ ನಿವೇದನವು (Narration) ಪ್ರಧಾನತೆಯನ್ನು ಪಡೆದಿದೆ. ಅಲ್ಲಲ್ಲಿ ಅನುಗೊಂಡ ಆನುಷಂಗಿಕ ವರ್ಣನೆಗಳು ಕತೆಯ ಸಂವಿಧಾನವನ್ನು ಪೋಷಿಸುತ್ತ ಅದರ ಕಳೆಯನ್ನು ಹೆಚ್ಚಿಸುವಂತಹವು ಆಗಿವೆ.

ಮನವನ್ನು ಮುಟ್ಟಿ ಮರ್ಮಜ್ಞರ ಮೆಚ್ಚುಗೆಯನ್ನು ಗಳಿಸುವಲ್ಲಿ ಈ ಕವನವು ಜಯಶೀಲವಾಗಿ ತನ್ನನ್ನು ಕಟ್ಟಿದವನಿಗೆ ತಕ್ಕ ಹೆಸರನ್ನು ತಂದಿದೆ. ಇದರ ಯಶಸ್ವಿತೆಯ ರಹಸ್ಯವು ಇದರ ಹೃದಯಂಗಮತೆಯಲ್ಲಿ ಇದೆ. ಈ ಹೃದಯಂಗಮತೆ ಉದಾತ್ತ ಭಾವಧ್ವನಿಯಿಂದ ಹುಟ್ಟಿದುದು. ಈ ಧ್ವನಿಗೆ ನವ್ಯ ಚಿತ್ತಾಕರ್ಷಕ ಕತೆಯೆ ವಾಹನವು. ಸುಲಭವಾದ ರೀತಿ, ಸರಲವಾದ ಗತಿ, ಸಾಹಜಿಕತೆಯ ಕಥನ, ಪದಗಳ ಸೊಂಪು, ಹಾಡಿನ ಇಂಪು, ಔಚಿತ್ಯದ ಸರಸ ವರ್ಣನೆ, ಅನುಕೂಲವೃತ್ತದ ಅಂಗೀಕಾರ, ಸಂಯಮದ ಸಮತೂಕ, ಸಮುಕಟ್ಟಿನ ವಿಕಾಸ, ಇವುಗಳು ಈ ಆಕರ್ಷಕತೆಯ ಅಂಗಗಳಾಗಿವೆ. ಈ ಅಂಗಗಳೆಲ್ಲವನ್ನು ಅನನ್ಯವಾಗಿ ಆವರಿಸಿ ಒಪ್ಪಿ ನಿಂತಿರುವುದು 'ಅಭಿಸಾರ' ಎಂಬ ಇದರ ಅನ್ವರ್ಥಕ ಹೆಸರಿನಿಂದ ಅಭಿಪ್ರೇತವಾದ ಅನೂನ ರಹಸ್ಯವು.

ಅಭಿಸಾರ ಎಂದೊಡನೆ ಗೂಢ ಪ್ರೇಮದ ರಮ್ಯಚಿತ್ರಗಳು ನೆನಪಿಗೆ ಬರುವುವು. ಇಂತಹ ಅನುರಕ್ತ ಜೀವನದ ಒಂದು ದೃಶ್ಯವು ಇದರ ಪೂರ್ವರಂಗದಲ್ಲಿ ಚಿತ್ರಿತವಾಗಿದೆ. ವಾಸವದತ್ತೆ ಪ್ರಣಯಜೀವಿ. ಅವಳ ಪ್ರಣಯವು ಅನರ್ಗಳವಾದುದು. ಅಂತೆಯೆ ಅದು ಕತ್ತಲೆ, ಗಾಳಿ, ಮಳೆಗಳನ್ನು ಗಮನಿಸದೆ ಸ್ವೈರ ವೃತ್ತಿಯಿಂದ ಎಲ್ಲಿಯೊ ಹೊರಟಿದ್ದಿತು. ದಾರಿಯಲ್ಲಿ ಅದಕ್ಕೆ ಆಕಸ್ಮಿಕ ತಡೆ ಉಂಟಾಯಿತು. ಇದರಿಂದ ಅದರ ಉನ್ಮಾದವು ಕುಂಠಿತವಾಗದೆ ಸಂಕಟದಲ್ಲಿ ಸಮಾರಂಭವನ್ನು ನೆರವೇರಿಸಲು ಅದು ಸಾಹಸಪಟ್ಟಿತು. ತಾತ್ಪೂರ್ತಿಕವೇ ಆಗಲಿ, ತನ್ನ ಅಂದಿನ ಆಟದ ಮೊದಲಿನ ಗುರಿಯನ್ನು ಮರೆತು ಮಿಂಚಿನ ಮಿಂಚಿನಲ್ಲಿ ಮಿಂಚಿನಂತೆ ಮಿಂಚಿದ ಒಂದು ರೂಪಕ್ಕೆ ಮೈಸೋತಿತು. ಅಭಿಸಾರಿಕೆಯ ಈ ಅಭಿಸಾರವು ಇನಿತು ಅಸ್ವಾಭಾವಿಕ, ಅನೈತಿಕ. ವಿಕೃತ, ಕಶ್ಮಲ! ಇಂತಹ ಆತ್ಯಂತಿಕ ವಿಷಯವೈಪರೀತ್ಯದ ಗತಿಯಾವುದು ?

ಈ ಚಿತ್ರದ ನೆರೆಯಲ್ಲಿ–ಇದಿರಿದಿರಲ್ಲಿ–ಇನ್ನೊಂದು ಅಭಿಸಾರದ ಚಿತ್ರವನ್ನು ಈ ಕವನದ ಉತ್ತರ ರಂಗವಾಗಿ ಚಿತ್ರಿಸಿ ತೋರಿಸಿದೆ. ಅಂತಹದೇ ಒಂದು ಸಂನಿವೇಶ; ಅವೇ ಆ ಪಾತ್ರಗಳು; ರಚನೆ ಮಾತ್ರ ಬೇರೆ. ಇಲ್ಲಿಯ ಅಭಿಸಾರದ ವಿಧಾತನು ಅಂದು ' ಮಧುರಾಪುರದಲಿ ಬೀದಿಯ ಮರದಡಿಯಲಿ ಮಲಗಿರುವ ಸಾಧು ' ಇವನ ಇಂದಿನ ಅಭಿಸಾರದ ಅಚಲ ಉದ್ದಿಷ್ಟವು ಅಂದಿನ – ಅಂದದ ಅಲ್ಲ – ಅಭಿಸಾರಿಕೆ. ಅವಳಂತೆ ಇವನೂ ಪ್ರಣಯಿ; ಆದರೆ ಈ ಪ್ರಣಯವು ಕಶ್ಮಲ ಕಾಮುಕತೆಯಿಂದ ಕಲಂಕಿತವಾದುದಲ್ಲ. ಚಿನ್ನದಂತೆ ನಿತಾಂತ ಸಂಯಮಾನಲದಲ್ಲಿ ನಿತ್ಯ ಪರಿಪೂರ್ತಿಗೊಂಡು ವಿಶ್ವತೋಮುಖ ಪ್ರಕಾಶಮಾನವಾದುದು. ತನ್ನ ಕೃತಕರ್ಮದ ಪರಿಪಾಕದಂತಿರುವ ವಾಸವದತ್ತೆಯ ಕಂದಿ ಕುಂದಿ ಕಳೆಯಳಿದ ವಿಗ್ರಹವು ಜುಗುಪ್ಸೆಯಿಂದ ಆತನನ್ನು ಪರಾಙ್ಮುಖನಾಗಿಸಲಿಲ್ಲ. ತನ್ನ ಪೂರ್ವ ಸಂಕಲ್ಪವನ್ನು ಆತನು ನಿಯಮಿತವಾಗಿ ಪೂರ್ತಿಗೊಳಿಸಿದನು. ಆತನ ಸೌಹಾರ್ದದ ಮೈಸೋಂಕು, ಕಾರುಣ್ಯದ ಉಪಚಾರಗಳು ಸಂಜೀವನ ಔಷಧಿಯಂತೆ ಅವಳನ್ನು ಸಚೇತನಗೊಳಿಸಿದುವು. ಉಪಗುಪ್ತನ ಅಭಿಸಾರವು ಫಲಿಸಿತು. ಪರಿತ್ಯಕ್ತೆ ಪಾವನಳಾದಳು.

ಈ ಕವನವಿಹಗನ ಇಕ್ಕೆಲ ರೆಕ್ಕೆಗಳಂತಿರುವ ಎರಡು ವಿಧದ ಈ ಅಭಿಸಾರದ ಸಾಮ್ಯ-ವೈಷಮ್ಯನಿಷ್ಠ ಸಾಮರಸ್ಯವು ಅವಲೋಕನೀಯವಾಗಿದೆ. ವಿರೋಧದ ವಿಷಮತೆಯಲ್ಲಿ ವಿಕಸನಗೊಂಡು ಸಮತೆಯ ಸಮನ್ವಯದಲ್ಲಿ ಸಂಮೇಲನಗೊಳ್ಳುವುದು ಇದರ ವಿಶೇಷವು. ವಾಸವದತ್ತೆ ಮತ್ತು ಉಪಗುಪ್ತರ ಅಭಿಸಾರದ ವಿಧಾನಗಳು ಅನ್ಯೋನ್ಯ ವಿರೋಧಿಯಾದುವು. ಒಂದರ ಅಧಿಷ್ಠಾನವಾದ ಪ್ರಣಯವು ಅತ್ಯಾಸಕ್ತಿಯ ಅಧೋಗತಿಯಿಂದ ಪಶುಸಮಾನವಾದರೆ ಇನ್ನೊಂದರದು ಅನಾಸಕ್ತಿಯ ಔನ್ನತ್ಯದಿಂದ ದೇವೋಪಮವಾದುದು. ಇದಕ್ಕೆ ಅನುಗುಣವಾಗಿ ಮೊದಲಿನದರ ಪರಿವಾರ: ಕಾರ್ಗಾಲ, ಕಗ್ಗತ್ತಲೆ, ನಟ್ಟಿರುಳು; ಮತ್ತೊಂದರದು ವಸಂತಕಾಲ, ಉತ್ಸವಸಂಭ್ರಮ, ಬೆಳುದಿಂಗಳು. ಎಲ್ಲೆಲ್ಲಿಯೊ ಹುಟ್ಟಿ ಹರಿಹರಿವ ತೊರೆಗಳು ಒಮ್ಮೆ ಒಂದೆಡೆಗೆ ಒಂದುಗೂಡುವಂತೆ, ಇಂತು ವಿಷಮ-ವಿಷಮವಾಗಿ ವರ್ತಿಸಿದ ಈ ಅಭಿಸಾರಗಳು ಕೊನೆಗೆ ಸಮತೆಯಲ್ಲಿ ಸಂಗಮಗೊಳ್ಳುವುವು. ಲೋಕದೃಷ್ಟಿಯಿಂದ ಅಧಮ ಪಾಪಿಷ್ಠೆಯಾದ ವಾಸವದತ್ತೆಯನ್ನು ಮೃತ್ಯುಮುಖದಿಂದ, ಅವನತಿಯ ಪಾತಾಳಖಾತದಿಂದ ಉದ್ಧರಿಸಿ ಉಪಗುಪ್ತನು ತನ್ನ ವಿಶ್ವಕುಟುಂಬಿತ್ವದ ಧನ್ಯತೆಯನ್ನು ಪಡೆಯುವನು. ಪ್ರಪಂಚಕ್ಕೆ ಪುನರ್ದತ್ತೆಯಾದ ವಾಸವದತ್ತೆ ಮರಳಿ ಬಂದ ಬೆಳಕಿನೊಂದಿಗೆ ಹೊಸತೊಂದು ಬಾಳಿನ ಬೆಳಕನ್ನು ಕಾಣುವಳು.

ಈ ಕವನದ ಮೇಲುಮೆ ಅದರ ಧ್ವನಿಯಲ್ಲಿದೆ. ಧ್ವನಿ ಎಂದರೆ ಸೂಚಕತೆ (suggestiveness); ಹೇಳಿದ ಮಾತುಗಳ ಅಭಿಪ್ರಾಯದಿಂದ ಹೇಳದೆ ಇದ್ದ ಮಾತುಗಳ ಹೆಚ್ಚಿನ ಅಭಿಪ್ರಾಯವನ್ನು ಹೊಳೆಯಿಸುವ ಜಾಣ್ಮೆಯದು; ಇದು ಉತ್ತಮ ಕಾವ್ಯದ ಗುಣವೆಂದು ಬಲ್ಲವರು ಎಣಿಸುವರು. ಇಂತಹ ಧ್ವನಿ ಈ ಕವನದಲ್ಲಿ ಎಲ್ಲೆಲ್ಲಿಯೂ ಎದ್ದು ಕೇಳಿಸುವುದು. ಮೊದಲು ಮೆಟ್ಟಲಿಗೆ ವಾಸವದತ್ತೆಯ ಅಭಿಸಾರದ ಆವರಣವನ್ನು ಇನ್ನೊಮ್ಮೆ ಓದಿ ನೋಡುವ.

**ಮಿಂಗೆ ಬೀಸುವ ಗಾಳಿಗೆ ನಡು ನಡುಗುತೆ**
**ನಗರದೊಳಿಹ ದೀವಿಗೆ ನಂದಿಹುವು !**

ಮಳೆಗಾಲದ ಬಾನೊಳು ತಾರಗೆಗಳು
ಮೊಳಗುವ ಕಾರ್ಮುಗಿಲೊಳು ನುಸುಳಿಹುವು !

ವಾಸವದತ್ತೆಯ ವಿಷಯಾಸಕ್ತಿಯ ನಂಜನ್ನು ಸಹಿಸಲಾರೆವು ಸಹಿಸಲಾರೆವು, ಎಂದೆನ್ನುವಂತೆ ಆ ನಡುರಾತ್ರಿಯಲ್ಲಿ ನಗರದ ದೀವಿಗೆಗಳು 'ನಡು ನಡುಗುತೆ' ನಂದಿದುವು ! ಕಪ್ಪು ಮೋಡಗಳು ಕೂಡ ಅವಳ ಕಪ್ಪುಕೆಲಸಕ್ಕೆ ಹೇಸಿ ಕೂಗಿಟ್ಟುವು ! ಕಿರುಗಣ್ಣಿನ ಚಿಕ್ಕೆಗಳು ಇದನ್ನು ಕಾಣುವ ಪಾಪ ನಮಗೆ ಬೇಡವೆಂದು ಆ ಕಪ್ಪುಮೋಡಗಳ ಮರೆಯಲ್ಲಿ ಅಡಗಿಕೊಂಡುವು ! ಇಂತು ಇಡಿಯ ಲೋಕವೇ ಬೇಡ ಬೇಡವೆನ್ನುತ್ತಿರುವಾಗ ಯೌವನಮದ-ಮತ್ತೆ ವಾಸವದತ್ತೆ ತನ್ನ ಕೃಷ್ಣಸಂಕಲ್ಪವನ್ನು ಈಡೇರಿಸಲು ತನ್ನ ವಿವಿಧ ವಿಲಾಸ ಸಾಮುಗ್ರಿಯಿಂದ ಸಡಗರಗೊಂಡು ರಭಸದಿಂದ ಮುಂದುವರಿದಳು. ಅನೈಸರ್ಗಿಕವಾದ ಅವಳ ಕಾಮಸಂಕಲ್ಪವು ಬಹುಕಾಲ ಜಯಿಸಲಾರದು ಎಂಬುದನ್ನು ಸೂಚಿಸುವಂತೆ ಅವಳ ನಡೆಗೆ ತಡೆ ಉಂಟಾಯಿತು. ಆಗ ಅವಳು

................ತಿಳಿಯದೆ ನಡು ನಡುಗಿದಳು !

ಮುಂದೆ ತನ್ನ ಮನೆಗೆ ಬರಬೇಕೆಂದು ಅವಳು ಉಪಗುಪ್ತನನ್ನು ಬೇಡಲು, ಅದಕ್ಕೆ ಉತ್ತರವಾಗಿ ಆ ವಿಜಿತೇಂದ್ರಿಯ ಹೇಳುವ

ಹೊರಟಿರುವಲ್ಲಿಗೆ ತೆರಳುವುದಿನ್ನು !

ಎಂಬ ನಯದ ಒಂದೇ ಕಿರುಮಾತಿನಲ್ಲಿ ಎಷ್ಟು ಸೂಚ್ಯವಾಗಿ ಅವಳ ಬೀಭತ್ಸ ಪ್ರಣಯದ ತೀವ್ರ ನಿರ್ಭರ್ತ್ಸನೆಯಿದೆ ಎಂಬುದನ್ನು ಗಮನಿಸಬೇಕು. ಇದಾಗಲು, ವಾಸವದತ್ತೆಯ ಕುತ್ಸಿತ ಪ್ರಣಯಜೀವನದ ಮುಂಬರುವ ಘೋರ ಪ್ರಳಯವನ್ನು ನಿದರ್ಶಿಸುವಂತೆ 'ಮುಗಿಲೊಳು ಪ್ರಳಯದ ಭೇರಿ' ಮೊಳಗಿತು. ವಿಧಿಯ ಈ ಸಂಕೇತವನ್ನು ತಿಳಿದೋ ತಿಳಿಯದೆಯೋ

ಅಳಕುತೆ ನಟಿ ಮನದೊಳು ಕದಲಿದಳು !

ಅನಂತರ ಉಪಗುಪ್ತನ ಅಭಿಸಾರದ ಸಂನಿವೇಶ. ಆತನು ಪರಿತ್ಯಕ್ತೆಯಾದ ವಾಸವದತ್ತೆಯ ಬಳಿ ಹೋಗಿ ಕೂಡುವನು; 'ಅನುನಯ'ದಿಂದ

ಅವಳ ತಲೆಯನ್ನು ತನ್ನ ತೊಡೆಯಲ್ಲಿ ಇರಿಸುವನು; ಅವಳ ಅಂಗಗಳಿಗೆ ಚಂದನರಸವನ್ನು ತೊಡೆಯುವನು. ಪ್ರಸಂಗವು ಎಂತಹದೇ ಇರಲಿ, ಎಷ್ಟಾದರೂ ಅವಳು ಹೆಣ್ಣು; ಇವನು ಗಂಡಸು. ಈತನ 'ಅನುನಯ' ದೂರದ ಪ್ರಣಯಗಹ್ವರವನ್ನು ತಳಕಿಸುವ ಕಳ್ಳದಾರಿ ಆಗಿರಲಾರದೆ? 'ಬಲವಾನ್ ಇಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ'. ಒಳಗೊಳಗೆ ಹುದುಗಿಕೊಂಡು ಕಾದಿರುವ ಯಾವುದೊ ಒಂದು ಆಸೆ ಆತನ ಈ ಸ್ಫುಟ ಸತ್ಕೃತಿಗೆ ಪ್ರೇರಕವಾಗಿರಬಹುದು. ಎಂಬೀಪರಿಯ ಶಂಕೆ-ಕುಶಂಕೆಗಳಿಗೆ ಎಡೆ ದೊರೆಯದಿರಲಿ ಎಂದು ಈ ಘಟನೆಯನ್ನು ಬಣ್ಣಿಸುವಾಗ ಕವಿ ಬಲು ಎಚ್ಚರದ ಹೆಜ್ಜೆಯಿಕ್ಕುತ್ತ 'ಕರುಣಾನಿಧಿ', 'ಮುನಿ', 'ಅಮಲಮತಿ' ಎಂಬ ವಿಶೇಷಣಪದಗಳನ್ನು ಉಪಯೋಗಿಸಿ, 'ಆತನು ಜಿತೇಂದ್ರಿಯ, ಸಿದ್ಧಸಂಯಮಿ, ಅತಿಶುದ್ಧಹೃದಯಿ, ಕಾರುಣ್ಯವಲ್ಲದೆ ಬೇರಾವ ಸಲ್ಲದ ಆಸೆಯ ಸುಳಿವಿಗೂ ಆತನಲ್ಲಿ ಎಡೆ ಇಲ್ಲ' ಎಂದು ಮಾರ್ಮಿಕವಾಗಿ ಎಚ್ಚರದ ಸೂಚನೆಗಳನ್ನು ಕೊಡುವನು.

ಅಭಿಸಾರದ – ಅಭಿಸಾರಗಳ–ಕತೆ ಮುಗಿಯಿತು. ಆದರೆ ಅಲ್ಲಿಗೆ ಅಲ್ಲಿಯ ನಾಯಕ–ನಾಯಿಕೆಯರ ಜೀವನಕತೆ ಮುಗಿಯಲಿಲ್ಲ. ಹಾಗೆ ನೋಡಿದರೆ ಈ ಸಂನಿವೇಶದಿಂದ ನಿರ್ದಿಷ್ಟವಾದ ಉಪಗುಪ್ತನ ಮುಂದಿನ ಕತೆ ಹೆಚ್ಚೇನು ಹೇಳಬೇಕಾದುದು ಇರಲಿಕ್ಕಿಲ್ಲ. ಆದರೆ ವಾಸವದತ್ತೆ ——? ಅವಳ ಮುಂದಿನ ಕತೆ—ನಿಜವಾಗಿ ನಿವೇದನೀಯವಾದ ಅವಳ ಮುಂದಿನ ಕತೆ — ಪಶ್ಚಾತ್ತಾಪಪರಿಪೂತ ಅಸಂಗ ಜೀವನದ–ತನ್ನಂತೆ ಅಮಾರ್ಗಿಗಳಾಗಿ ಪರಿತ್ಯಕ್ತೆಯರ, ಅಭಾಗಿನಿಯರ, ಅಬಲೆಯರ ಸೇವೆಗಾಗಿ ಮೀಸಲಾಗಿಸಿದ ಶೇಷ ಜೀವನದ — ಉತ್ತರ ಕತೆ–ಇದೆಲ್ಲವನ್ನು ಯಾರು ಹೇಳಬೇಕು ? ಕವಿ ಹೇಳಿಲ್ಲ, ಹೇಳುವುದಿಲ್ಲ. ಏಕೆಂದರೆ ಹೇಳಿ ಹೇಳುವುದಕ್ಕಿಂತ ಹೇಳದೆ ಹೇಳುವುದು ಹೆಚ್ಚಳದ ಹೇಳಿಕೆ. ಕಾವ್ಯಸೃಷ್ಟಿಯ ಅದ್ಭುತ ಚಮತ್ಕಾರವಿದು !

ಮಾನವಪಾತ್ರಗಳ ಈ ರಂಗಭೂಮಿಗೆ ಹಿನ್ನೆಲೆಯಂತಿದ್ದ ಇನ್ನೊಂದು ಪ್ರಪಂಚವನ್ನು ಇದೀಗ ಲಕ್ಷಿಸಬೇಕಾಗಿದೆ. ಇದು ಪ್ರಕೃತಿ ಪ್ರಪಂಚ. ಇಲ್ಲಿಯ ವಸ್ತುಗಳು ಬರಿಯ ಬಣ್ಣದ ತೆರೆಯ ಮೇಲಿನ

ನಿರ್ಜೀವ ಚಿತ್ರಗಳಂತೆ ಇರದೆ ಸಚೇತನ ಸಹೃದಯ ಜೀವಿಗಳಾಗಿವೆ. ಅವು ಇಲ್ಲಿ ನಡೆಯುತ್ತಿರುವ ಈ ನಾಟಕವನ್ನು ಕುತೂಹಲದಿಂದ ಅವಲೋಕಿಸುತ್ತ ಆ ಆ ಸಂನಿವೇಶಗಳಲ್ಲಿ ಸಹಭಾಗಿಗಳಾಗುತ್ತ ತಮ್ಮ ಸೇರಿಕೆ-ಬೇಸರಿಕೆ, ನೋವು-ನಲಿವುಗಳನ್ನು ಹೊರಪಡಿಸುವುವು. ವಾಸವದತ್ತೆಯ ಹೇಯ ಅಭಿಸಾರಕ್ಕೆ ಹೇಸಿ ಕಾರ್ಮೋಡಗಳ ಹಿಂದೆ ಅಡಗಿದ ಚಿಕ್ಕೆಗಳ ಸಮಾಚಾರವನ್ನು ಹಿಂದೆ ನೋಡಿದುದಾಗಿದೆ. ತಪಃಸಮಾಧಿಯಲ್ಲಿ ನಿದ್ರಿತನಾದ ಉಪಗುಪ್ತನನ್ನು ಲೋಲುಪ್ತಿಯಿಂದ ಅಂಧವಾದ ಯೌವನ ಮದವು ಪದಹತಿಯಿಂದ ಎಚ್ಚರಿಸಲು, ಆ ಉನ್ಮಾದದ ಸ್ವರೂಪವೆಂತಹದು ಎಂಬುದನ್ನು ತೋರಿಸಲು ನಿಸರ್ಗವು ನೆರವಾಗಿ ಬಂದು ತನ್ನ ಮಿಂಚಿನ ಕರದೀಪವನ್ನು ಹಿಡಿಯುವುದು. ಉಪಗುಪ್ತನು ವಾಸವದತ್ತೆಯ ಪ್ರಣಯಭಿಕ್ಷೆಯನ್ನು ನಿರಾಕರಿಸಿದ ಬಳಿಕ ಅವಳಾ ಹೊಲ್ಲದ ಕೃತಿಯನ್ನು ನಿಷೇಧಿಸಲು ನಿಸರ್ಗವು ಉಗ್ರಮುದ್ರೆಯನ್ನು ಪ್ರಕಟಿಸುವುದು:

ಸುಳಿಯಿತು ಗಾಳಿ, ಹೊಳೆಯಿತು ಮಿಂಚು
ಮೊಳಗಿತು ಮುಗಿಲೊಳು ಪ್ರಳಯದ ಭೇರಿ!

ಇಳೆಯೊಳದೆತ್ತಲು ಇಳಿದುದು ನೀರು !

ಉಪಗುಪ್ತನ ಅಪೂರ್ವ ಅಭಿಸಾರದ ಸುಸ್ವಾಗತಕ್ಕೋಸುಗ ನಿಸರ್ಗವು ರಚಿಸಿದ ಈ ಸಂಭ್ರಮದ ಸಮಾರಂಭವನ್ನು ನೋಡಿ:

.. .......... .. ಬಂದಿತು ಮದುರಿತು;

........ ........... ... ...................

ಚೆಂದವದೆನಿತೋ ಮಂದಾನಿಲನಾ!

ಚೆಂದಳಿರುಗಳಿಂದಂದವನಾಂತೆನಿ
ತೊಂದು ಮಹೀರುಹವೃಂದವು ನಲಿವುದೊ!

ಇದನ್ನು ನೋಡು ನೋಡುತ್ತ ಬಾನಿನತ್ತ ಹೊರಳಿದರೆ

ಪುರವನು ಬರಿದಾಗಿರುವುದನಿಂತು
ನಿರುಕಿಸಿ ಶಶಿ ನಗುತಿರುವನು ಮೌನದೆ !

ಮೌನಿಯಾದ ಈ ಚಂದ್ರಮನು ಸಂತೋಷದಿಂದ ಉಪಗುಪ್ತನ ಈ ಸತ್ಕಾರ್ಯಕ್ಕೆ ಸಹಕಾರಿಯಾಗಿ ತನ್ನ ಬೆಳುದಿಂಗಳ ಪಾಲ್ಮಳೆ ಕರೆವನು.

ಆ ಪುಣ್ಯನಿಧಿಯ ಪವಿತ್ರ ಹಸ್ತದಿಂದ ಈ ಅನಾಥೆ ಉಪಚಾರಗಳನ್ನು ಹೊಂದಲು

**ಅಲರುಗಳೆಲ್ಲ ಕುಲುಕುಲು ನಕ್ಕುವು !**

ಹೂವುಗಳ ಈ ನಗೆ ಅಣಕದ ಹಾಸ್ಯವಲ್ಲ ಸೌಹಾರ್ದದ ಹರ್ಷವೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಬರಿಯ ಆನಂದ ಪ್ರದರ್ಶನದಿಂದ ಸುಹೃದರು ಮಾಡಬೇಕಾದ ಸ್ವಕಾರ್ಯವು ಮುಗಿಯಲಿಲ್ಲ ಎಂಬುದನ್ನು ಸ್ವಂತದ ಕೃತಿಯಿಂದ ತೋರಿಸುವಂತೆ ಮೆಲುಗಾಳಿ ಓಡಿ ಬಂದಿತು.

**ಒಲವಿಂದಲಿ ಮೆಲ್ಲೆಲರು ತೀಡಿತು !**

ಮೇಲೆ ವಿವೇಚಿಸಿದ ಧ್ವನಿಯಾಗಲಿ, ಪ್ರಕೃತಿಸೌಹಾರ್ದಸಂನಿವೇಶವಾಗಲಿ, ಇವುಗಳ ಶ್ರೇಯಸ್ಸು ಅಭಿಸಾರದ ಮೂಲ ನಿರ್ಮಿತಿಗೆ ಸಲ್ಲುವುದು ಎಂದರೆ ಅದಕ್ಕೆ ಹೇಳಬೇಕಾದುದು ಇಷ್ಟೆ. ಇಲ್ಲಿಯ ಇಂತಹ ಕೆಲವು ಅಂಶಗಳಿಗೆ ಈ ಕವಿ ಆ ಕವಿಂದ್ರನಿಗೆ ಕೆಲವಂಶದಲ್ಲಿ ಉಪಕೃತನಾಗಿರಬಹುದಾದರೂ ಋಣಿಯಾಗುವಷ್ಟು ಕಲ್ಪನಾದರಿದ್ರ—ಭಾವನಾದರಿದ್ರನಲ್ಲ ಎಂಬುದನ್ನು ಈತನ ಮಿಕ್ಕ ಕವನಗಳನ್ನು, ಹೆಚ್ಚಾಗಿ ಪ್ರಕೃತಿಗೀತಗಳನ್ನು ಪರಿಶೀಲಿಸಿ ಮನಗಾಣಬಹುದು.

## ೧೩ ತಿಲಾಂಜಲಿ

ಇದು ವಿಲಾಪಗೀತವು. ಈ ವಿಧದ ಕವನಗಳಿಗೆ ಆಂಗ್ಲಭಾಷೆಯಲ್ಲಿ (elegy) ಎಂದರೆ ವಿಲಾಪಿಕೆ ಎನ್ನುವರು. ಈ ಜಾತಿಯ ಗೀತಗಳಿಗೆ ಅತಿಯಾದ ಶೋಕವು ಪ್ರೇರಕವಾದುದು. ಈ ಶೋಕವು ಪ್ರಿಯ ಜನರ ವಿಯೋಗದಿಂದ ಜನಿಸಿದುದು. ಅಗಲಿದ ತನ್ನವರು ಹೆಚ್ಚು ಹೆಚ್ಚು ಹತ್ತಿರದವರೂ ಗುಣವಂತರೂ ಆಗಿದ್ದು ಅಗಲಿಕೆಯ ಅಳಲು ಉದ್ರೇಕಿಸಿದಂತೆ ಈ ಗೀತಗಳ ಉಗ್ರತೆಯೂ ಉತ್ಕಟತೆಯೂ ಅಧಿಕವಾಗುವುದು. ಇಂತಹ ಹುಟ್ಟುವಳಿಯ ಮೂಲಕ ವಿಲಾಪಗೀತಗಳು ಪ್ರಾಯಿಕವಾಗಿ ವ್ಯಕ್ತಿನಿಷ್ಠವಾದುವು. ಆದರೆ ಈ ವೈಯಕ್ತಿಕತೆ ಕವಿಯ ಕೈವಾಡಕ್ಕೆ ಸಿಲುಕಿ ಸರ್ವಜನೀನತೆಯಲ್ಲಿ ಮೈಗೂಡಿಕೊಳ್ಳುವುದು (Universal appeal).

'ತಿಲಾಂಜಲಿ'ಯ ಉಗಮದ ಆವರಣವನ್ನು ಕುರಿತು ಚಿಂತಿಸುವಾಗ ಸಹೃದಯನ ಬಗೆ ಕದಡುವುದು; ಎದೆ ನಡುಗುವುದು. ಅದೊಂದು ದಾರುಣ ದುರಂತ ಘಟನೆ. ಈ ದುರಂತಕ್ಕೆ ಗುರಿಯಾದ ಕವಿಹೃದಯವು ಜ್ವಾಲಾಮುಖಿಯ ತೀವ್ರತೆಯಿಂದ ಕುದಿಯಿತು, ಕಂಪಿಸಿತು, ಸ್ಫೋಟಗೊಂಡಿತು. ಈ ಸ್ಫೋಟದ ಸಿಡುಕಲುಗಳು ಹೆಪ್ಪುಗಟ್ಟಿ ಪ್ರಸ್ತುತ ಕವನವಾಗಿ ಗೋಚರಿಸಿದುವು. ರಚಿಸಬೇಕೆಂದು ರಚಿಸಿದ ಗೀತವಿದಲ್ಲ. ಪ್ರಕಟಿಸಬೇಕೆಂದು ಪ್ರಕಾಶಿತವಾದ ಕೃತಿ ಇದಲ್ಲ. ಅಳಲಿನ ಆವೇಗದಲ್ಲಿ ಹಿಡಿಸಲಾರದೆ ಹೇಗೆ ಹೇಗೋ ಹೊರಬಿದ್ದು ಆಕಾರ ತಳೆದ ಈ ಗೀತದ ತುಂಡುಗಳನ್ನು ಒಂದುಗೂಡಿಸಿ ಮೊದಲು ಬಾರಿ ಬೆಳಕನ್ನು ಕಾಣಿಸಿದ ಶ್ರೇಯಸ್ಸು 'ಶ್ರೀರಂಗ'ರಿಗೆ ಸಲ್ಲುವುದು. 'ಪ್ರಾರ್ಥನೆ' ಶ್ರೀಕೃಷ್ಣನ ನಿಧನಾನಂತರ ಮೂರನೆಯ ದಿನ ಬರೆದುದು. 'ತಿಲಾಂಜಲಿ'ಯ ಪದ್ಯಗಳು ಮುಂದೆ ಎರಡು ಮೂರು ವಾರಗಳಲ್ಲಿ ಮೈದೋರಿದುವು. ಈ ಮೇರೆಗೆ ಒಂದರಲ್ಲಿ ಒಡಲ ಕಿಚ್ಚಿನ ಉರುಬನ್ನು, ಇನ್ನೊಂದರಲ್ಲಿ ಶೋಕದ ಕಿಂಚಿತ್ ಸ್ತಿಮಿತದಸೆಯ ವಿಚಾರಪರತೆಯನ್ನು ಪರಿಶೀಲಿಸಬಹುದಾಗಿದೆ.

ಮನೆಗೆ ಬೆಂಕೆ ಬಿದ್ದು ಎಲ್ಲೆಲ್ಲಿಯೂ ಉರಿಯೋ ಉರಿಯಾಗಿ ಹಬ್ಬುತಲಿದೆ; ಕಟ್ಟಡದ ಭಾಗಗಳು ಕುಸಿ ಕುಸಿದು ಕರಿಹೊಗೆ ಮುಸುಕಿ ಕತ್ತಲೆ ಕವಿಯುತಲಿದೆ; ಅದರಲ್ಲಿ ಸಿಕ್ಕಿಕೊಂಡು ಅಸಹಾಯತೆಯಿಂದ ಬೆಂದು ಬಳಲುತ ಭಗವಂತನಲ್ಲಿ ಮೊರೆಯಿಡುವ ಧೀರೋದಾತ್ತ ಪುರುಷನ ಕರುಣಾಜನಕ ದೃಶ್ಯವು 'ಪ್ರಾರ್ಥನೆ'ಯನ್ನು ಪಠಿಸುವ ಓದುಗನ ಬಗೆಗೆ ಬಂದು ನಿಲ್ಲುತ್ತದೆ. ಭಾವಾನುಗುಣವಾಗಿ ಇಲ್ಲಿಯ ನುಡಿಯ ರೀತಿ ಉಗ್ರ–ಮೃದುವಾಗಿದೆ.

ಶೋಕದಗ್ಧ ಹೃದಯವು ತನ್ನ ಕಷ್ಟವನ್ನು ತೋಡಿಕೊಳ್ಳುವಾಗ ಮಾತಿನ ಚಿನ್ನಾಟವಾಡಲು ಎಳಸುವುದಿಲ್ಲ. ಹೇಳುವುದನ್ನು ನೇರವಾಗಿ ಹೇಳುವುದು, ತಿಳಿಯಾಗಿ ತಿಳುಹುವುದು, ತ್ವರಿತವಾಗಿ ಹೊರಪಡಿಸುವುದು ಅದರ ಸ್ವಭಾವ. ಇಂತಹ ನಿತಾಂತ ಸಹಜ ಸರಲ ಸ್ವಭಾವೋಕ್ತಿಯಿಂದ 'ತಿಲಾಂಜಲಿ'ಯ ಪದ್ಯಗಳು ಹೊರಹೊಮ್ಮಿವೆ. ಅನರ್ಗಲವಾದ ಅಳಲ ತೊರೆ ಅಲೆಯಲೆಯಾಗಿ ಹಲವು ಸಲ ಭೋರ್ಗರೆಯುತ ನೆರೆಯೇರಿ,

ಹುಚ್ಚುಹೊಳೆ ಹರಿದು ನಸು ಇಳಿದಿರುವಾಗ, ಮೆಲ್ಲನೆ ಒಳದನಿಯಿಂದ ತನ್ನ ಕತೆಯನ್ನು ಉಸುರಲು ಅನುವಾಗುವುದು.

ಇತ್ತು; ಈ ಜೀವನಕ್ಕೂ ಕೆಲಕಾಲ ಸಂತಸವೆಂಬುದು ಇತ್ತು. ಆದರೆ ಅದೀಗ ಇಲ್ಲದಾಯಿತು !

ಬೆಳಗಿನಲಿ ಮಂಜುವನಿ ಹೊಳೆಯುತೆಳದಳಿರಲ್ಲಿ
ಎಳಗಾಳಿಯೊಡನಾಡಿ ತಿಳಿಯಲೀಯದೆ ಹೋಯ್ತು !

ನೆನಪು, ಹಿಂದಿನ ನೆನಪು; ಅನುಭವಿಸಿದ ವ್ಯಥೆಯ ನೆನಪು, ಒಂದೊಂದು ಸಂದರ್ಭ, ಒಂದೊಂದು ಚಿತ್ರ; ಚಿತ್ರಪಟದ ಗತಿಯಿಂದ ಸುಳಿಸುಳಿದು ನುಸುಳುವುದು. ಕೊನೆಗೊಂದು ದೃಶ್ಯ. ಕರಾಲದರ್ಶನ; ಶ್ರೀಕೃಷ್ಣನ ಚಿತಾದಹನ ! ರಕ್ತ ರಕ್ತವಾದ ವಿಕಟ ಜ್ವಾಲೆಗಳ ತಾಂಡವ ನರ್ತನ; ರುದ್ರ ರುದ್ರತಮವಾದ ರೌದ್ರಾಕೃತಿ; ಎನಿತು ಮರೆಸಿದರೂ ಮರೆಯಾಗದೆ ಊರಿ ನಿಂತ ಘೋರ ವಿಗ್ರಹ !

ಇದಿರಲ್ಲಿ ರೌದ್ರರೂಪದ ಮಿಳ್ತು ಕುಣಿವುದೈ !

ಸಂತಾಪದ ನಿಬಿಡಸಂವರಣದಲ್ಲಿ ಅವತರಿಸಿದ ಈ ಗೀತ ಬರಿಯ ದೀನ ವಿಲಾಪದಿಂದ ಮೊದಲಿಸಿ ವಿಲಾಪದಲ್ಲಿಯೆ ಮುಗಿತಾಯವಾಗಿಲ್ಲ. ಮಗನ ಸುಗುಣಗಳ ಸ್ಮರಣ, ಆತನ ಮರಣ ಮೂಲಕ ಸಂತಾಪ, ಸಂತಾಪದ ಉಲ್ಬಣ, ಮೊದಲಾದ ಸಾಮಾನ್ಯ ವಿಧಗಳಲ್ಲದೆ,

ಎನ್ನ ಕುಲದೊಳು ನಾಡಿಗೆ ಇನ್ನು ಕೊಡುವೆನು ಆದಾರನು ?

ಎಂದು ತನ್ನ ಸೇವೆಗಲ್ಲ, ನಾಡಸೇವೆಗೆ ಮಗನು ಉಳಿಯಲಿಲ್ಲ ಎಂಬ ಉಚ್ಚ ತ್ಯಾಗ ಭಾವನೆ, ಮನೋನಿಗ್ರಹ, ಶೋಕ-ವಿವೇಕ ಹೋರಾಟ, ಧೃತಿಯ ಸಹಕಾರ, ವಿವೇಕದ ವಿಜಯ, ಪರಮಾತ್ಮನಲ್ಲಿ ಲೀನತೆ, ಅಧ್ಯಾತ್ಮ ಶಾಂತಿ, ತತ್ತ್ವದೃಷ್ಟಿ, ಅಮರ ಆಶಾವಾದ ಮೊದಲಾದ ಮೆಟ್ಟಲುಗಳಿಂದ ಅಸಾಧಾರಣ ವೀರವೃತ್ತಿಯ ಮನಸಿನ ಆರೋಹಣ -- ಇದೆಲ್ಲದರ ಹೃದಯಸ್ಪರ್ಶಿಯಾದ ಭಾವೋನ್ಮೀಲನವನ್ನು ಇಲ್ಲಿ ಅವಲೋಕಿಸಬೇಕು.

ಅಂದು ಪತಿಸತಿಯರೊಲವಿಂದೆ ತಂದೆಯೆ, ನಿನ್ನ
ಮುಂದೆ ಹಚ್ಚಿದ ದೀಪ

ಎಂಬ ಉಜ್ವಲ ಆದರ್ಶದಿಂದ ಆಚರಿಸಿದ ದಾಂಪತ್ಯ ಜೀವನದ ಉತ್ಕೃಷ್ಟ ಫಲವಾಗಿದ್ದ,

ರಣಗೊಂಬು ಕರೆದೊಡನೆ ಕುಣಿದುದಾತನ ಹೃದಯು
ಮಣಿದೆನ್ನ ಕಾಲ್ಗಳಿಗೆ ರಣಕೆ ನಡೆದನು ವೀರ

ಇಂತಹ ವೀರ ಮಗನನ್ನು ಕಳೆದುಕೊಂಡು

ಕರದೀಪವಾರಿದುದು ! ಮುರಿದುದ್ದೈ ಕೈಗೋಲು !

ಎಂದು ಕಳವಳಗೊಂಡ ತಂದೆಯು

ಕರುಳುಗಳು ಹುರಮುರಳಿ ಮುರಿಗೆಗೊಳ್ಳುವುವಯ್ಯ !

ಉರಿ ಬೇಯಿಸುವುದಲ್ಲಿ; ಉರಿ ಬೇಯಿಸುವುದಿಲ್ಲಿ !

ಎಂಬ ಕ್ಲೇಶದ ಕ್ರಂದನವನ್ನು ಕೇಳಿ, ಕರಗದ ಕರುಳೊಂದು ಇದೆಯೆ? ಈ ' ಜವನಿಟ್ಟುರದ ತೊಡಕಿನಲ್ಲಿ, ಬಿದ್ದು ತೊಳಲಾಡುವಾಗಲೂ

ಮುಂದಿನ್ನು ನಡೆಯುದೊಡೆ ಕುಂದೆನಗೆ ಬರದಿಹುದೆ?

ಎಂದು ಕರ್ತವ್ಯಜಾಗರೂಕನಾದ ಕವಿ ದಾರಿ ತಪ್ಪೀತೆಂದು ದಾರಿಗನನ್ನು ಅರಸುತ್ತ

ಹರಿ, ನೀನೆ ಮಗನಾಗಿ ಕರುಣಿಪುದು; ಕರುಣಿಪುದು !
ಕಾರೊಳಗೆ ಕೈವಿಡಿದು ದಾರಿಯನು ನಡೆಯಿಸೈ !

ಎಂದು ಅಚಲ ವಿಶ್ವಾಸದಿಂದ ಬೇಡುತ್ತ, 'ದಯಾಂಬುಧಿ ದೇವನ ಪಾದದಾಸರ' ಪಡೆದು ಧೈರ್ಯಗೊಳ್ಳುವನು. ಆಗ ಪರಮಾತ್ಮನ ಈ ಸೃಷ್ಟಿಯ ವಿಷಯದಲ್ಲಿ ಆತನ ದೃಷ್ಟಿಯೇ ಬೇರೆಯಾಗಿ

ಹದಿನೆಂಟು ವರುಷಗಳ ಒದುಕೆಂಬುದೆಳಗಾಯಿ;
ಅದು ಪಕ್ವವಪ್ಪುದಕೆ ಮೊದಲೆ ಕೊಯ್ದೊಯ್ವುದೇ !

ಎಂಬಲ್ಲಿಯ ಅವಿವೇಕ,

............ಇದ್ದೊಬ್ಬ ಮಗನಿಂದು ತೀರಿದನು !

ಎಂಬಲ್ಲಿಯ ನೈಘೃಣ್ಯ,

ಸಂತತವು ಆಪತ್ತು ! ಸಂತತವು ಆಪತ್ತು !

ಎಂಬಲ್ಲಿಯ ವೈಷಮ್ಯ, ಇವುಗಳಿಗೆ ಸಮರ್ಪಕವಾದ ಸಮಾಧಾನವನ್ನು ಕಂಡು ಹಿಡಿಯುವನು.

ತಮಗೆ ಪ್ರತಿಕೂಲವಾದ ಘಟನೆಗಳನ್ನು ಅನ್ಯಾಯವಾಗಿ ಭಾವಿಸಿ ವಿಶ್ವಚಾಲಕ ದೇವನನ್ನು ದೂಷಿಸುವವರೇ ಈ ಪ್ರಪಂಚದಲ್ಲಿ ಬಹುಜನ. ಇದು ಸಮಂಜಸವೆ? ಅಲ್ಪ ಶಕ್ತಿ, ಅಲ್ಪ ಬುದ್ಧಿಯ ಮನುಷ್ಯರು ತಮ್ಮ ಮೊಟಕಾದ ಅಳತೆಗೋಲಿನಿಂದ ಅನಂತಬಲಿ ದೇವದೇವನ (ನಾಸ್ತಿಕರ ಅಧಿಕ ಪ್ರಸಂಗದ ಸಂದರ್ಭವಿದಲ್ಲ) ಈ ವಿರಾಟ ವಿಶ್ವದ ಅಪಾರ ಅದ್ಭುತ ವ್ಯಾಪಾರಗಳನ್ನು ಎಣಿಸಿ ತೀರ್ಮಾನಿಸುವುದು ಸರಿಯೆ? ಸ್ವಾರ್ಥ ಕೇಂದ್ರಿತ ವಾದ ಈ ದೃಷ್ಟಿಯನ್ನುಳಿದು ವಿಶಾಲವೀಕ್ಷಣದಿಂದ ವಿಶ್ವನಾಥನ ವಿಶ್ವ ಚಾಲನೆಯ ಸ್ವತಂತ್ರ ಬೃಹತ್ ಮಾನದಂಡವನ್ನು ಲಕ್ಷಿಸಿ ಈ ಸೃಷ್ಟಿಯ ಗೂಢ ರಹಸ್ಯವನ್ನು ಅರಿತುಕೊಳ್ಳಲು ಆಯಾಸಪಡುವವರು ಎಷ್ಟು ಜನರು? ಇಂತಹ ನೂತನವಾದ ಒಂದು ನೋಟದಿಂದ ವಿಶ್ವದ ನಿರಂತರ ಘಟನೆಯಾದ ಬದುಕು-ಸಾವಿನ ಸಮಸ್ಯೆಯನ್ನು ಬಿಡಿಸಲು ಕವಿ ಇಲ್ಲಿ— ಈ ಮಹಾವಿಪತ್ತಿಯಲ್ಲಿಯೂ—ಪ್ರಯತ್ನಿಸಿದಾನೆ.

ಈ ವಿಶ್ವವೆಂಬುದೊಂದು ಅದ್ಭುತ ದೇವಾಲಯ. ಅನಾದಿ ಕಾಲ ದಿಂದ ಅಪೂರ್ವ ಶಿಲ್ಪಿಯೊಬ್ಬನು ಅನ್ಯಾದೃಶ ಕಲಾಪ್ರೌಢಿಮೆಯಿಂದ ಇದನ್ನು ಕಟ್ಟುತ್ತಿರುವನು. ಈತನ ರೀತಿ, ಈತನ ಕುಶಲತೆ ಈತನದೇ ಆದುದು. ಕಟ್ಟುವವನು ಒಪ್ಪು-ಓರೆಗಳನ್ನು ನೋಡಿಕೊಳ್ಳಬೇಕಾಗು ತ್ತದೆ; ಅಲ್ಲಲ್ಲಿ ಕೆಡಿಸಲೂ ಬೇಕಾಗುತ್ತದೆ. ಹೀಗೆ ಕೆಡಿಸಿದನೆಂದು, ಕೆಡಿಸು ವಾಗ ಸುತ್ತಿಗೆ ಸೋಂಕಿ ತಮಗೆ ನೋವಾಯಿತೆಂದು, ಆತನನ್ನು ದೂರು ವುದು ಅವಿವೇಕ. ಈಶಕೃತಿಯ ಕುಂದನ್ನು ಎಣಿಸುವ ಕ್ಷುದ್ರ ಮನುಜರು ಮೊದಲು ತಮ್ಮ ನ್ಯೂನಗಳನ್ನು ಮನನ ಮಾಡಿಕೊಳ್ಳುವುದು ಯುಕ್ತ.

> ಆವ ಎಡೆಯೊಳು ಒಂದುವುದು ಆದು ಆವುದು ಎಂಬುದನು ಅರಿತು
> ದೇವ ದೇವನು ಹುಟ್ಟು ಸಾವುಗಳನು ಎಸಗುವನು.

> **ಗುಡಿಯ ಕಟ್ಟುವ ಶಿಲ್ಪಿ ಕೊಡತಿಯೊಳು ಬೆಟ್ಟಿ ಕ**
> **ಲ್ಲೊಡೆವುದನು ಕಂಡು ಅವನು ಕಿಡುಕನು ಎಂದು ಎನಲು ಆಹುದೆ?**

ಕಾರ್ಗಾಲದ ಕಗ್ಗತ್ತಲೆಯಲ್ಲಿ ಹೊಳೆವ ಮಿಂಚಿನಂತೆ ವಿಷಾದದ ವಿಲಯವಿಕ್ಷೋಭೆಯಲ್ಲಿ ಆಕಸ್ಮಿಕವಾಗಿ ಸ್ಫುರಿಸಿದ ಈ ತತ್ತ್ವದರ್ಶನವು ನವ್ಯರುಚಿರ ಕಲ್ಪನೆಯಿಂದ ಕಳಕಳಿಸಿದೆ. “ಗುಡಿಯ ಕಟ್ಟುವ ಶಿಲ್ಪಿ!” ಇನಿತು ಕಿರುವಾತಿನಲ್ಲಿ ಈ ವಿಶ್ವವನ್ನು ಒಂದು ಗುಡಿಗೆ ಹೋಲಿಸಿ, ಅದರ ರಚಕನನ್ನು ಶಿಲ್ಪಿಯಾಗಿ ನಿರೂಪಿಸಿ, ಕವಿ ಸೃಷ್ಟಿಯ ವಿಷಯದಲ್ಲಿ ಪವಿತ್ರ ರಮ್ಯ ಭಾವನೆಯನ್ನು. ಪರಮಾತ್ಮನಲ್ಲಿ ಪೂರ್ಣತೆಯ ಪ್ರಬಲ ಶ್ರದ್ಧೆಯನ್ನು. ಜೀವನದಲ್ಲಿ ಉನ್ನತ ಆಶಾವಾದವನ್ನು ಬಹು ಸೂಕ್ಷ್ಮವಾಗಿ ಪ್ರಕಟಿಸಿದಾನೆ. ಕಾವ್ಯ ವೇದಾಂತದ ಈ ರಹಸ್ಯವು ಶಾಸ್ತ್ರವೇದಾಂತದ ರಹಸ್ಯಕ್ಕಿಂತ ಸಯುಕ್ತಿಕವೂ ಲಲಿತವೂ ಆಗಿದೆ. ಶೆಲ್ಲೆ ಕವಿ ತನ್ನ ಮುದ್ದಿನ ಗೆಳೆಯ ಕೀಟ್ಸ ಕವಿಯ ಮರಣವನ್ನು ಕುರಿತು ಇದೇ ವಿಧವಾದ ರಮಣೀಯ ಭಾವವನ್ನು ಪ್ರತಿಪಾದಿಸಿದಾನೆ:

“He is a portion of the loveliness,
Which once he made more lovely.”

ಮೂರು ವರುಷಗಳ ಹಿಂದೆ ನಾಗಪುರದ ‘ವಿಹಂಗಮ’ ಎಂಬ ಮಹಾರಾಷ್ಟ್ರ ಮಾಸಪತ್ರಿಕೆಯಲ್ಲಿ ‘ತಿಲಾಂಜಲಿ’ಯನ್ನು ಕುರಿತು ವಿಸ್ತಾರವಾದ ಲೇಖನವು ಪ್ರಕಟವಾಗಿದ್ದು, ಅದರಲ್ಲಿ Lycidas, Adonis, In Memorium ಮತ್ತು Elegy Written in a Country Churchyard ಎಂಬೀ ಆಂಗ್ಲಭಾಷೆಯ ನಾಲ್ಕು ನಾಮಾಂಕಿತ ವಿಲಾಪಗೀತಗಳೊಡನೆ ಈ ಕವನವನ್ನು ಒರೆಹಚ್ಚಿ ಸಹಜತೆ, ಏಕಾಗ್ರತೆ, ಉತ್ಕಟತೆ, ಕಲಾವಂತಿಕೆ ಮತ್ತು ಸುಸಂಗತ ತತ್ತ್ವದರ್ಶನ ಈ ವಿಚಾರಗಳಲ್ಲಿ ಈ ಕವನವು ಸಮರ್ಪಕವೂ ಸ್ವಯಂವೈಶಿಷ್ಟ್ಯಯುಕ್ತವೂ ಆಗಿದೆ ಎಂದು ತೋರಿಸಿದೆ. ‘ರಂಗನಾಥ’ರ ಈ ವಿವೇಚನೆ ಗಮನಾರ್ಹವಾಗಿದೆ.

## ಜೀವನ—ಕಾವ್ಯ

ಜೀವನವು ಹಿರಿದು; ಏಕೆಂದರೆ ಅದು ವಿಶ್ವವ್ಯಾಪಿ. ಸಾಹಿತ್ಯವು ಜೀವನದಲ್ಲಿ ಹುಟ್ಟಿ ಜೀವನದಲ್ಲಿ ಬೆಳೆದು ಜೀವನವನ್ನು ಸಂಸ್ಕಾರಗೊಳಿಸುವುದು. ಜೀವನದಲ್ಲಿ ಹುಟ್ಟಿದರೂ ಆದರಿಂದ ಅದು ಬೇರೆಯಾಗಿ

ತೋರಿಸುವವರು ಕೆಲರು. ಅದನ್ನೊಂದು ಸಿಂಗಾರಗೊಂಬೆಯಾಗಿ ರಚಿಸಿ ಬರಿಯ ಕಲೆಯೆಂದು ಮೆರೆಸುವವರು ಕೆಲರು. ಸಾಹಿತ್ಯವು ಕಲೆಯಾದರೂ ಜೀವನದ ನಿತ್ಯ ಅವಿಭಕ್ತ ಅಂಗವೆನ್ನುವಂತೆ ಅದನು ಆಚರಿಸುವವರು ಕೆಲರು.

ಶ್ರೀ. ಸಾಲಿಯವರ ಕಾವ್ಯವು ಅವರ ಜೀವನದಲ್ಲಿ ಅರಳಿ ಜೀವನದೊಂದಿಗೆ ಬೆರೆತು ಬಂದಿದೆ. ಅದನು ಅವರು ಕಲೆಯ ಹಟದಿಂದ ಗಳಿಸಿಲ್ಲ; ಸಾಹಿತ್ಯದ ಸಾಹಸದಿಂದ ಬೆಳೆಸಿಲ್ಲ. ಜೀವನದ ನಲಿವು ನೋವುಗಳನು ಅನುಭವಿಸುವಾಗ ಭಾವನೋನ್ಮೇಷದಿಂದ ಅವರು ಎಲ್ಲೆಡೆಯಲ್ಲಿ ಸೌಂದರ್ಯವನ್ನು ಆಲಿಸಿದರು. ಸೌಂದರ್ಯದ ಈ ರಸದೃಷ್ಟಿ ಕಾವ್ಯವನ್ನು ಪ್ರೇರಿಸಿತು. ಸೌಂದರ್ಯವು ಕಲೆಯ ಜೀವನವಾದರೆ ಸೌಂದರ್ಯಜೀವಿಯಾದ ಅವರ ಜೀವನ–ಕಾವ್ಯವು ಕಲೆಯುಹುದು. 'ಶಾಂತಂ ಶಿವಂ ಸುಂದರಂ' ಎಂದು ಭಾರತೀಯರ ಕಲಾಸೃಷ್ಟಿಯ ಆದರ್ಶವನ್ನು ಸೂಚಿಸುವ ಕಲೆ ಅದು.

ಸಾಲಿಯವರ ಸೌಂದರ್ಯದರ್ಶನವು ಅಗಾಧವಾದುದು. ಅದಕೆ ಸ್ಥಲಕಾಲಗಳ ಪರಿಮಿತಿ ಇಲ್ಲ; ಕಷ್ಟನಷ್ಟಗಳಲ್ಲಿ ಲೋಪವಿಲ್ಲ. ಪ್ರಶಾಂತ ಸಮಯದಲ್ಲಿ ವಿನೋದವಾಗಿ ಕುಳಿತಾಗ,

(೧) ಸುಂದರಂ ನಿಖಿಲಮೀ ವಿಶ್ವಂ;

(೨) ..................... ಪೆಂಪೆನಿತೊ ಸೌಂದರ್ಯದಾ !

(೩) ಸರ್ವವ್ಯಾಪಿ ಸೌಂದರ್ಯಮೀ ವಿಶ್ವಮಂದಿರದ ನೆಲೆ;

(೪) ಜಗದೊಳಗೆ ಸೊಂಪಿದೇಂ ಪರ್ಬಿದುದೊ !

ಎಂದು ಹಾಡುತ ನಲಿವುದು ಯಾರಿಗೂ ಸುಲಭವಾದರೆ; ಏಕಪುತ್ರನಿಧನದಂತಹ ದಾರುಣ ವಿಪತ್ತಿಯಲ್ಲಿ ಪ್ರಪಂಚ ಎಂಬುದೊಂದು ಘೋರಾರಣ್ಯ ದೇವನೆಂಬವನೊಬ್ಬ ಭೀಷಣ ರಾಕ್ಷಸನಾಗಿ ತೋರುವುದು ಸಾಮಾನ್ಯ ಅನುಭವವಾಗಿರಲು, ಪರಮಾತ್ಮನಲ್ಲಿ ದೇವದೇವತ್ವದ ರಚನಾಚಾತುರ್ಯವನ್ನು 'ಗುಡಿಯ ಕಟ್ಟುವ ಶಿಲ್ಪಿ'ಯ ಅವ್ಯಂಗ ಕಲಾವಂತಿಕೆಯನ್ನು ಜಾನಿಸುವುದು ಸೌಂದರ್ಯದ ನೈಜ ದ್ರಷ್ಟಾರನಿಗಲ್ಲದೆ ಅನ್ಯರಿಗೆ ಸಾಧ್ಯವೆ ?

ವಿಶ್ವವನ್ನು ಸೌಂದರ್ಯಮಯವಾಗಿ ಕಾಣುವವನಿಗೆ ಜೀವನದಲ್ಲಿ ಎಲ್ಲಿಯೂ ಸೌಂದರ್ಯ ಸಾಕ್ಷಾತ್ಕಾರವಾದರೆ ಸೋಜಿಗವಲ್ಲ.

ಸೌಂದರ್ಯಮೆಂಬುದಿದು ಜೀವಿತದ ಸರ್ವಸ್ವಂ!

ಈ ಸೌಂದರ್ಯವು ಎಂದಿನದೊ ಒಂದು ಅನುಭವವಲ್ಲ; ಅನುದಿನದ ಅನುಭೂತಿ. ಅಂತೆಯೆ

(೧) ಸುಂದರಂ ಬದುಕು;

(೨) ಚೆಂದವಿದು, ಚೆಂದವೀ ಬದುಕು ಗಡ!

(೩) ಇನಿದೈ ಬದುಕಿನಿದಿನಿದೈ ನಲ್ಮೆಯ
ನನೆಯಲರಲು ಬದುಕಿನಿದಿನಿದಿನಿದೈ !

(೪) ಅನುಪಮಮಾದೀ ನಾಡಿನ ನಲ್ಬೊಬ–
ಗಿನ ಕಡಲೊಳಗೊಲವಿಂದೋಲಾಡುತು
ಮನುದಿನದೊಳ್ ನಲಿನಲಿದಪೆನೀ ಚೆಲ್ವಿನ ಕರುನಾಡಿನೊಳು!

ಎಂಬೀ ವಿಧದ ಇಂಚರವು ಅವರ ಜೀವನ–ಕಾವ್ಯದಲ್ಲಿ ಮತ್ತೆ ಮತ್ತೆ ಕೇಳ ಬರುವ ಸಂಗೀತದ ಪಲ್ಲವಿಯಾಗಿದೆ.

ಜೀವನದಲ್ಲಿ ಭವ್ಯ ವಿಶ್ವಾಸವುಳ್ಳ ಪ್ರಬಲ ಆಶಾವಾದಿಯೆ ಸಾವಿನಿಂದ ಕವಿದ ಈ ಜೀವನದಲ್ಲಿ ಬದುಕಬಲ್ಲನು; ಬದುಕಿ ಗೆಲ್ಲಬಲ್ಲನು. ಸಾಲಿಯವರ ಜೀವನಶ್ರದ್ಧೆ ಅಪಾರವಾದುದು. ಉದಾತ್ತ ಕರ್ತವ್ಯ ಭಾವನೆಯ ಬೃಹತ್ ಶಿಲಾಪ್ರಸ್ತರದ ಮೇಲೆ ಅಧಿಷ್ಠಿತವಾದ ಅವರ ಅಚಲ ಆಶಾವಾದಿತ್ವದ (optimism) ದೀಪಸ್ತಂಭವು ನಾನಾ ಸಂಕಷ್ಟಗಳ ಪ್ರಲಯ ಕಲ್ಲೋಲ ಪರಂಪರೆಯಿಂದ ಕಂಪಿತವಾದುದಿಲ್ಲ.

ಭರತಭೂಮಿಯ ಸೇವೆ ಪೂರ್ವಪುಣ್ಯದಿ ಎನಗೆ
ದೊರೆತಿರ್ಪುದೆಂಬೊಸಗೆಯಿಂದೆ ಬದುಕಿರ್ಪೆನಾಂ
ತಿರೆಯ ಮೇಲೆಂತಾನುಮಿಂ ಕೇಳದಿರ್ "ಬದುಕುವಾಸೆ
ನಿನಗೇಕಿದೆಂ"ದು!

ಇಂತು ಸೌಂದರ್ಯದರ್ಶನದೊಂದಿಗೆ ಚಿರ ಸಹಚಾರಿಣಿಯಾದ ಉನ್ನತ ಕರ್ತವ್ಯನಿಷ್ಠೆ ಅವರ ಜೀವನ ಶ್ರದ್ಧೆಯನ್ನು ಅಮರವಾಗಿಸಿದೆ.

ಇಂತಹದೊಂದು ಅಮರಜೀವನಶ್ರದ್ಧೆಯ ಬಲದಿಂದ ವರ್ಡ್ಸ್‌ವರ್ಥ್ ಕವಿ ಮೃತಿಮಯವಾದ ಈ ಜೀವನದಲ್ಲಿ ಅಮರತ್ವದ ಕುರುಹುಗಳನ್ನು ಪರಿಶೀಲಿಸಿದನು:

Though nothing can bring back the hour
Of splender in the grass, of glory in the flower,
We will grieve not, rather find
Strength in what remains behind... ... ... ...
In the soothing thoughts that spring out of human suffering,
In the faith that looks through death,
In years that bring the philosophic mind.

— *Intimations of Immortality*

## ಸೇರಿಕೆ—ಬೇಸರಿಕೆ

ನಿರ್ದೋಷ, ಗುಣಪರಿಪೂರ್ಣ ವಸ್ತು ಯಾವುದು? ಸಾಲಿಯವರ ಕಾವ್ಯ ವಿಚಾರದಲ್ಲಿ ತಕ್ಕ ತಿಳುಹಿನ ಅಗತ್ಯವಿದೆ. ಮೊದಮೊದಲಿನ ಅವರ ಕೆಲ ಗೀತಗಳಲ್ಲಿ ಅಪಕ್ವತೆಯನ್ನೂ ಸಂಸ್ಕಾರದ ಕೊರತೆಯನ್ನೂ ಬೇರೆಡೆ ಷಟ್ಪದೀ ಸಂಪ್ರದಾಯದ ಪಡಿಯಚ್ಚು ಮೂಡಿದುದನ್ನು ಭಾವಗಳು ಪುನರುಕ್ತವಾದುದನ್ನು ಎತ್ತಿ ತೋರಿಸಬಹುದು. ಈ ವಿಧದ ನ್ಯೂನಗಳಿಂದ ಯಾವ ಕವಿಯೂ ನಿರ್ಲಿಪ್ತನಿಲ್ಲದಿರಲು—ಇದ್ದರಾದರೂ ಏನು—ಇಂತಹ ಉದ್ಯೋಗದಿಂದ ನಿಷ್ಪತ್ತಿ ಏನು? ಸಾಲಿಯವರಿಗೆ ಪ್ರತಿಭೆ ಸಾಲದು; ಅವರ ಕಲ್ಪನಾಜ್ಯೋತಿಗೆ ಉಜ್ವಲತೆ ಕಡಿಮೆ; ಮುಂತಾಗಿ ಒಂದು ದನಿ ಗುಣಗುಟ್ಟಿದರೆ, " ಶ್ರೀ. ಸಾಲಿಯವರು ಪ್ರತಿಭಾಸಂಪನ್ನರು; ಪ್ರತಿಭೆಯೆಂದರೆ ದೂರದಲ್ಲಿ ಕಾಚಿನಂತೆ ಹೊಳೆದು ಹತ್ತಿರದಲ್ಲಿ ಕಾಲಿಗೆ ಚುಚ್ಚುವ ಕಲ್ಪನೆಯಲ್ಲ........" ಎಂದು ಇನ್ನೊಂದು ಸಾರುವುದು. ಸಾಲಿಯವರ ಕಾವ್ಯವು ಕ್ಲಿಷ್ಟ, ಕರ್ಕಶವಾಗಿದೆ ಎಂದು ಕೆಲರು ಬೇಸರಪಟ್ಟರೆ, ಸರಸತಿಯ ವೀಣೆಯಂತೆ ಅದು ಲಲಿತಮಧುರವಾಗಿದೆ ಎಂದು

ಎತ್ತಿ ನಲಿದಾಡುವವರು ಇಲ್ಲದೆ ಇಲ್ಲ. ಸಾಲಿಯವರ ಕವಿತೆ ಒರಟು ಮೊಟ್ಟೆ, ಉಕ್ಕಿನ ಕಡಲೆ ಎಂದು ಒಂದು ಸ್ವರ ಕೇಳಿಸಿದರೆ, ಬಲ್ಲಿದರ ಬೇರೊಂದು ಸ್ವರವು ಹೀಗೆ ಉಸುರುವುದು: "ಅವ್ಯಕ್ತರೂಪದಲ್ಲಿರುವ ಭಾವಕ್ಕೆ ಶರೀರವನ್ನು ಕೊಡುವಂದು........ಹೃದಯ ಸಂಸ್ಕಾರಕ್ಕೆ ಎಷ್ಟು ಮಹತ್ತ್ವವೊ ಅಷ್ಟೆ ಭಾಷಾಸಂಸ್ಕಾರಕ್ಕೂ ಮಹತ್ತ್ವವು......... ಸಾಲಿಗಳು ಸಂಸ್ಕೃತ ಹೃದಯರು. ಬಿಗಿಯಾದ ಭಾವಗಳು ಬರುವಲ್ಲಿ ಮಾತಿನ ಬಿಗುವು ಅವಶ್ಯವಾಗಿರುತ್ತದೆ. ಅದು ಬಾರದಿರುವುದು ಕಾವ್ಯ-ಕಲೆಗಳಿಗೊಂದು ಕೊರತೆ."

ಸಾಲಿಯವರ ಕವನಕನ್ನಿಕೆ ನವನಾಗರಿಕತೆಯ ಬೆಡಗುಬಿನ್ನಾಣ ಅರಿಯಳು; ವ್ಯಾಕರಣ, ಛಂದಸ್ಸು, ಯತಿ, ಪ್ರಾಸ ನಿಯಮಗಳನ್ನು ಮುರಿದು ರಚಿಸಿದ ಅವರ ಗೀತಗಳಿಲ್ಲ; ಅವರು ಬೀದಿವಾಡುಗಳನ್ನು ಬರೆದಿದಾರೆಯೆ? ಮುಂತಾದ ಇನ್ನೂ ಹಲವು ದೂರುಗಳು ಇರುವುವು. ಇಂತಹ ಈ 'ಇಲ್ಲ'ಗಳ ಅಲ್ಲಗಳೆತಕ್ಕೆ ಎಲ್ಲಿಯಾದರೂ ತುದಿ ಮೊದಲು ಇದೆಯೆ? ಮಾವಿನ ಹಣ್ಣಿನ ರುಚಿ ಕೇಳಿದರೆ ಅದರಲ್ಲಿ ಹಲಸಿನ ಸಿಹಿ ಇಲ್ಲ, ಕೇದಗೆಯ ಸುಗಂಧ ಬಾರದು. ಸುಣ್ಣದ ಬಿಳಿಬಣ್ಣ ಎಲ್ಲಿ ಎಂದು ಹೇಳಿದರಂತೆ. ಒಬ್ಬೊಬ್ಬ ಕವಿಯದೊಂದು ಕಾವ್ಯ–ಜೀವನವಿದೆ, ಅದರದೊಂದು ಪರಿ ಇದೆ, ಒಂದು ವೈಶಿಷ್ಟ್ಯವಿದೆ. ಅದನು ಅರಿತು ಕುರಿತು ನೋಡಿ ನಿರ್ಧರಿಸುವುದೇ ವಿವೇಕ.

ಮಿಕ್ಕಿದ ಭಾಷಾಸಂಸ್ಕಾರವು ಸಾಲಿಯವರ ಕವನಗಳ ಒಂದು ವಿಶೇಷವು. ಇಂದಿನ ಹೊಸಗನ್ನಡ ಯುಗದಲ್ಲಿ ಅವರ ಹಳಗನ್ನಡ ರಚನೆ ಏಕೊ? ಅವರಂತೆ ಹಳಗನ್ನಡದಲ್ಲಿ ಬರೆವವರು ಇನ್ನೂ ಕೆಲರು ಇದ್ದಾರೆ. ಸಾಲಿಯವರು ಹೊಸಗನ್ನಡದಲ್ಲಿಯೂ ಬರೆಯದೆ ಇಲ್ಲ. ಹಳಗನ್ನಡದ ಸಂಸ್ಕಾರ ದೊಡ್ಡದು; ಮಾತಿನ ಬಿಗುವು ಹೆಚ್ಚು; ಗಾಂಭೀರ್ಯವಿದೆ. ಸೊಂಪು ಇದೆ; ಸಾರವತ್ತಾಗಿ ಹೇಳುವ ಸೌಕರ್ಯವಿದೆ; ಸಿದ್ಧ ನುಡಿ ಅದು. ಸಾಲಿಯವರ ಒಂದು ಹಳಗನ್ನಡ ಪದ್ಯವನ್ನು ಎತ್ತಿಕೊಂಡು ಅದರ ಭಾವವನ್ನು ಅಷ್ಟೇ ಪರಿಣಾಮಕರವಾಗಿ ಹೊಸಗನ್ನಡದಲ್ಲಿ ಹೇಳುವುದು ಸಾಧ್ಯವೇ ಎಂಬುದನ್ನು ಪರೀಕ್ಷಿಸಿ ನೋಡಬೇಕಾದುದು. ಅದೇನೆ

ಇರಲಿ. ಈ ಹಳಗನ್ನಡವು ಹಠಯೋಗ ಮಾತ್ರವಲ್ಲ. ಅದು ತಂತಾನೆ ಬಂದು ಬಿಡುವುದು. ಒಮ್ಮೆ ಹಳದು, ರೂಪದಲ್ಲಿ; ಒಮ್ಮೊಮ್ಮೆ ಹೊಸದು.

### ಓಂ ಶಾಂತಿಃ

ಜೀವನವನ್ನು ಹದಗೊಳಿಸಿ ಹಿರಿದಾಗಿಸುವ ಅಮರವಾಣಿ ಕಾವ್ಯವು. ಅದಕಾಗಿ ಅದು ಹಿರಿದು. ಕಾಲಚಕ್ರದಲ್ಲಿ ಸಿಲುಕಿಯೂ ಸಿಲುಕದೆ ಅಳಿಯದಾಗಿ ಬಾಳಿ ಉಳಿಯಬಲ್ಲ ಕಾವ್ಯ–ಕಲೆ ಹಿರಿಹಿರಿದು.

All things pass; strong art alone
Can know eternity;
The marble bust outlives the state; ... ... ...
Even the gods must die;
But sovereign poetry
Remains,
Stronger than death,

— *Gautier*

# ಚಿತ್ರಸೃಷ್ಟಿ

೧

ಜನನ ಭೂಮಿಯನ್ನು ಅವಲಂಬಿಸುವುದು ಜೀವಿಗಳಿಗೆ ಸಹಜ; ಪ್ರೀತಿಸುವುದು ಉತ್ಕ್ರಾಂತ ಜೀವಿಯಾದ ಮಾನವನ ಸ್ವಭಾವ; ಆದರಿಸಿ ಉಪಚರಿಸುವುದು ಸಂಸ್ಕೃತ ಮನೋವೃತ್ತಿಯ ಸ್ವಧರ್ಮ.

ಕವಿಯ ಭಾವನೆ ಉದಾತ್ತವಾದುದು; ಉತ್ಕಟವಾದುದು; ವಿವೇಕ ರಚಿತವಾದುದು; ಮಮತೆಯಿಂದ ಮುಗ್ಧವಾದುದಲ್ಲ.

ಕನ್ನಡನಾಡು ಕವಿಯ ಕುಲದೈವತವು, ಪರದೈವತವು. ಅದರಲ್ಲಿಯ ಪ್ರತಿಯೊಂದು ಪದಾರ್ಥವು ಪವಿತ್ರವಾದುದು; ಪೂಜನೀಯವಾದುದು.

ಏಕಾಂತ ಭಕ್ತಿಯ ಅಂತಿಮ ಸೀಮೆಯಿದು. ಇದರ ಭಾವಗಭೀರತೆ ಅಪೂರ್ವವಾಗಿದೆ. ಇದರ ವಿಚಾರದೀಪ್ತಿ ಉಜ್ವಲವಾಗಿದೆ.

ಶ್ರೀ:

ಕನ್ನಡದ ನೆಲದ ಹುಲ್ಲೆನಗೆ ಶಿವತುಳಸಿ !

ಕನ್ನಡದ ನೆಲದ ನೀರ್ವೊನಲೆನಗೆ ದೇವನದಿ !

ಕನ್ನಡದ ನೆಲದ ಕಲ್ಲೆನಗೆ ಶಾಲಗ್ರಾಮಶಿಲೆ! ಕನ್ನಡಂ ದೈವಮೆನಗೆ!

ಕನ್ನಡದ ಶಬ್ದಮೆನಗೋಂಕಾರಮೀಯೆನ್ನ

ಕನ್ನಡದ ನುಡಿಯೆ ಗಾಯತ್ರಿಯದ್ಭುತಮಂತ್ರ-

ಮಿನ್ನಾವುದೈ ಪೊರತು ಕನ್ನಡದ ಸೇವೆಯಿಂದಧಿಕಮೀ ಜಗದೊಳೆನಗೆ

ಪ್ರಮಾಥಿ, ಆಶ್ವಿನ ಶುಕ್ಲ ೧೧. (ಅಕ್ಟೋಬರ ೧೯೩೯)     ಸಾಲಿ ರಾಮಚಂದ್ರರಾಯ.

# ಪದ್ಯಗಳ ಅನುಕ್ರಮಣಿಕೆ

ತಾಯ್ತನದ ಚೆಲುವೇ ಚೆಲುವು. ತಾಯಿಯಿಂದ ತೊರೆದ ಮಾತು ರಸಗರ್ಭಿತವಾದುದು. ತಾಯ ಒಲುಮೆ ತಾಯ್ನುಡಿಯ ಒಲುಮೆಗೆ ಒಳದಾರಿ; ನುಡಿಯ ಒಲುಮೆ ನಾಡಿನ ಒಲುಮೆಗೆ ಹೆದ್ದಾರಿ.

ತಾಯಿ–ತಾಯಿನುಡಿ–ತಾಯಿನಾಡು ! ಒಂದು ಸೂತ್ರ; ಒಂದು ರಹಸ್ಯ. ಏಕವು ಅನೇಕವಾಗಿ, ಅನೇಕವು ಅಖಿಲವಾಗಿ ಏಕರೂಪತೆಯಿಂದ ನೆಲೆಗೊಳ್ಳುವುದು ಪ್ರೇಮದ ಅದ್ಭುತ ಪ್ರಭಾವವು.

ಕನ್ನಡವು ಇಂಪಾದ ನುಡಿ. ಇದರ ಸೊಲ್ಲು ಸುರಮ್ಯವಾದುದು. ಸರ್ವೇಂದ್ರಿಯಗಳಿಗೆ ಸೊಗನೀವ ಮಧುರಶಕ್ತಿ ಇದರಲ್ಲಿದೆ. ಇದರ ಮಾಧುರ್ಯದಿಂದ ಮುಗ್ಧನಾದ ಕವಿ ಮುಕ್ತವಾಣಿಯಿಂದ ಮಧುರವಾಗಿ ಹಾಡುವನು. "ಕನ್ನಡಂ ಕನ್ನಡಂ" ಎಂದು ಹಾಡುವಾಗಲೆ ಕನ್ನಡದ ಸೊಂಪನ್ನು ಬೀರುವನು. ನುಡಿವವನ ಅಧಿಷ್ಠಾನದಿಂದ ಮಂತ್ರಮಯವಾದ ಮಾತೇ ದೇವತೆಯಾಗಬಲ್ಲುದು. ಇಂತಹ ವಾಗ್ದೇವತೆಯ — ನರುದಂಬುಲಂಮೆಲ್ದ ಸರಸತಿಯ—ಚೆನ್ನುಸಿರೇ ಕನ್ನಡಂ! (೧ ಕನ್ನಡಂ)

ಸಿಹಿ, ಸೊಂಪು, ಸೊಬಗು! ಇದೊಂದರಲ್ಲಿಯೆ ಕನ್ನಡವ ಹೆಚ್ಚಳವಲ್ಲ. ಉತ್ತಮ ಸಂಸ್ಕಾರಗಳನ್ನು ಪಡೆದು ಬೆಳೆದು ಬಂದ ಭಾಷೆಯಿದು. ಈ ಸಂಸ್ಕಾರಗಳು ಅನೇಕ ಶತಮಾನಗಳಿಂದ ನಡೆದು ಬಂದಿವೆ. ಇದರ ಬಲದಿಂದಲೆ ಬಲೋನ್ನತರಾದ ಕನ್ನಡಿಗರು ಆಶ್ಚರ್ಯಕರವಾದ ಸಾಮ್ರಾಜ್ಯಗಳನ್ನು—ರಾಜಕೀಯ ಸಾಮ್ರಾಜ್ಯ, ಧಾರ್ಮಿಕ ಸಾಮ್ರಾಜ್ಯ, ಸಾಹಿತ್ಯ ಸಾಮ್ರಾಜ್ಯ, ಕಲಾಸಾಮ್ರಾಜ್ಯ— ಇವುಗಳನ್ನು ಕಟ್ಟಿ ಮೆರೆಸಿದರು. ಕನ್ನಡದ ಈ ಶಕ್ತಿ, ಈ ಘನತೆ, ಈ ಮೇಲ್ಮೆ, ಈ ಹಿರಿಮೆ, ಈ ಪರಂಪರೆ ಕೀರ್ತನೀಯವಲ್ಲವೆ?

(೨ ಕನ್ನಡವು)

ಈ ಕನ್ನಡದ ತಾಯ್ನಾಡು ಕನ್ನಡನಾಡು. ಇದರ ಘನತೆ ಅಪಾರವಾದುದು. ನಿಸರ್ಗದ ನೆಲೆ, ಧರ್ಮದ ಬೀಡು, ಜ್ಞಾನದ ಕಣಿ, ನೀತಿಯ ಮನೆ, ಕಲೆಯ ಆಗರ, ಸೊಬಗಿನ ಸುಗ್ಗಿ, ಈ ನಮ್ಮ ತಾಯ್ನಾಡು. (೩ ತಾಯ್ನಾಡು)

ಘನವಾದ ಕನ್ನಡ ನಾಡಿನ ಜೀವನದಲ್ಲಿಯ ಅಮೋಘವಾದ ಒಂದು ಸನ್ನಿವೇಶ. ಸುಮಾರು ಆರುನೂರು ವರ್ಷಗಳ ಆಚೆಯ ಒಂದು ಸಂದರ್ಭ. ಪರಕೀಯರ ಪದಹತಿಯಿಂದ ತೊತ್ತುಳಿಗೊಂಡ ಭಾರತೀಯ ಜನಾಂಗವು ತತ್ತರಿಸುತ್ತಿರಲು ಕನ್ನಡ ವೀರರು ಮುಂದೆ ಬಂದರು; ರಾಷ್ಟ್ರದ ಮೇಲಿನ ಘೋರವಾದ ಕುತ್ತನ್ನು ಕಿತ್ತೆಸೆದು ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿಯನ್ನು ಮತ್ತೆ ಪ್ರಸ್ಥಾಪಿಸಿದರು. ವಿಜಯ ದುಂದುಭಿ ಮೊಳಗಿತು. ವಿಜಯನಗರದ ಕೀರ್ತಿ ಬೆಳಗಿತು. (೪ ವಿಜಯ ದುಂದುಭಿ)

ಕನ್ನಡದ ಮಹಿಮೆ ಇಂತಹದು. ಎಷ್ಟು ಹಿರಿದಾದರೂ ಕನ್ನಡವು ಭಾರತದ ಒಂದು ಅಂಗವೇ ಸೈ. ಕನ್ನಡ ನಾಡಿನಲ್ಲಿ ನಲಿದಾಡುವ ಜೀವವು ಭಾರತಕ್ಕಾಗಿ ಹಂಬಲಿಸದೆ ಇದ್ದೀತೆ ? ಕನ್ನಡಕ್ಕಾಗಿ ಮಿಡಿಯುವ ಕವಿಯ ಹೃದಯವು ಅದೇ ಆ ಉದಾತ್ತ, ಉತ್ಕಟ, ಅವ್ಯಭಿಚಾರಿ ಭಾವದಿಂದ ಭಾರತಕ್ಕಾಗಿ ಮಿಡಿಯುವುದು. (೫ ಹಂಬಲು).

ಭಕ್ತಿಯು ಸಾಕಾರವಾದುದು. ಭಕ್ತನು ಚಿಂತಿಸುವ ಧ್ಯಾನಮೂರ್ತಿಯ ರೂಪವು ಎಂತಹದು ? ಅದರಲ್ಲಿ ಪರಿಪೂರ್ಣತೆ ಇದೆಯೆ ? ಅದು ಅಷ್ಟು ಪ್ರಭಾವಶಾಲಿಯೆ ? ಈ ಆಕ್ಷೇಪಗಳಿಗೆಲ್ಲ ಸಪ್ರಮಾಣವಾದ ಸಮಾಧಾನವುಂಟು. ಭರತಭೂಮಿ ಸಿರಿಯ ತವರೂರು; ಐಸಿರಿಯ ನೆಲವೀಡು. (೬ ಭರತಭೂಮಿ).

ನಮ್ಮ ತಾಯಿಗೆ ಗೆಲುವಾಗಲಿ, ಅವಳ ಕೀರ್ತಿಗೆ ಕಲಂಕವು ಬಾರದಿರಲಿ. ಅವಳ ಸಂಸ್ಕೃತಿಯ ಕುರುಹು ಈ ಬೆಳ್ಗೊಡಿ. ಉನ್ನತವಾದ ಈ ಧವಲಧ್ವಜವು ನಮಗೆ ಸದಾ ಉನ್ನತಿಯ ಮಾರ್ಗವನ್ನು ತೋರುವುದಾಗಲಿ. ಈ ನಮ್ಮ ತಾಯ ಮಡಲಲ್ಲಿ ಬೆಳೆದ ತೇಜೋಮೂರ್ತಿಗಳಾದ ನಮ್ಮ ಹಿರಿಯರು "ತೇಜಸ್ವಿನಾವಧೀತಮಸ್ತು" ಎಂಬ ಔಪನಿಷಧಿಕ ಅಮರ ದಿವ್ಯಮಂತ್ರವನ್ನು ಭಾರತದ ಸಂತಾನಗಳಿಗೆ ಸಾರಿದರು. ಆ ಮಂತ್ರದ ತೇಜಸ್ಸು ನಮ್ಮ ಹಿಂದಣ ಚರಿತ್ರೆಯಂತೆ ಮುಂದಣ ಚರಿತ್ರೆಯನ್ನು ತೇಜಸ್ವಿಯಾಗಿ ಮಾಡಲಿ. (೭ ನಮ್ಮ ಧ್ವಜವು)

ನಮ್ಮ ಹಿಂದಣ ಸಂಸ್ಕೃತಿಯು ಉನ್ನತವಾಗಿದೆ ಎಂದ ಮಾತ್ರಕ್ಕೆ ನಮ್ಮ ಇಂದಿನ ಸಂಸ್ಕೃತಿ ಉನ್ನತವಾಯಿತೆ ? ಮುಂದಣ

ಉನ್ನತಿಯನ್ನು ಬಯಸುವವರಾದ ನಾವು ಉನ್ನತ ದೆಸೆಯಲ್ಲಿ ಇರುವೆವೊ? ಇಲ್ಲ. ನಮ್ಮ ರಾಷ್ಟ್ರವು ಅವನತಿಯಲ್ಲಿದೆ. ರಾಷ್ಟ್ರೀಯ ಉನ್ನತಿಯಿಲ್ಲದೆ ನಮ್ಮ ಬಾಳಿನ ಏಳಿಗೆಯಿಲ್ಲ. ರಾಷ್ಟ್ರೀಯ ಉನ್ನತಿಗಾಗಿ ಭಾರತೀಯರ ಬಲವಾದ ಪರಿಶ್ರಮಗಳು ನಡೆದಿವೆ. ಭಾರತದ ಉನ್ನತಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಸಿದ ಮಹಾತ್ಮಾ ಗಾಂಧಿಯಂತಹ ಮಹಾನುಭಾವರು ನಮಗೆ ಮಾರ್ಗದರ್ಶಕರಾಗಿದ್ದಾರೆ. ಅವರ ಕೌಶಲದಿಂದ ಭಾರತದ ರಾಷ್ಟ್ರೀಯ ಆಂದೋಲನವು ಯಶೋಭಿಮುಖವಾಗಿದೆ. ಹಿಂಸೆ, ಅಸತ್ಯ, ಅಶಾಂತಿಯ ಉರಿಯಲ್ಲಿ ಬೇಯುತಲಿರುವ ಮಾನವ ಪ್ರಪಂಚಕ್ಕೆ ಆಸೆಯ ಮೇಘವು ತೋರುತಲಿದೆ. ಭಾರತದ ಧ್ವಜವು, ಜಾಗತಿಕ ಶಾಂತಿಯ ಧ್ವಜವು, ವಿಶ್ವಬಾಂಧವ್ಯದ ಧ್ವಜವು, ಮಾನವನಿಗೆ ಮಂಗಲಮಂತ್ರವನ್ನು ಬೋಧಿಸುವ ಧ್ವಜವು ಭಾರತದಲ್ಲಿ ಉದಿತೋದಿತವಾಗಿದೆ.

(೮ ನಮ್ಮ ಧ್ವಜವು).

ಈ ಧ್ವಜವು ಎಲ್ಲೆಲ್ಲಿಯೂ ಚೈತನ್ಯವನ್ನು ಹೊರಹೊಮ್ಮಿಸಿದೆ. ಭಾರತದಲ್ಲಿ ನವಶಕ್ತಿಯನ್ನು ನಿರ್ಮಿಸಿದೆ. ಭಾರತೀಯರ ಉಜ್ವಲವಾದ ಚರಿತ್ರೆಗೆ ಅಂಟಿಕೊಂಡಿದ್ದ ಪಾರತಂತ್ರ್ಯದ ಕೃಷ್ಣ ಕಲಂಕವನ್ನು ಅಳಿಯಿಸಿಬಿಡಲು ಭಾರತೀಯರು ಕಟಿಬದ್ಧರಾಗಿರುವರು. ಇಂದಿಗೆ ಭಾರತದ ಭೀಷಣ ರಾತ್ರಿಯು ಸರಿಯಿತು. ಭಾರತೀಯರ ಸ್ಥಿರಸಂಕಲ್ಪದ ಉದಯಾಚಲದಲ್ಲಿ ಭಾರತದ ಸ್ವಾತಂತ್ರ್ಯಭಾನು ಉದಯವಾಗುತ್ತಿರುವನು. ಆತನಿಗೆ ಸ್ವಾಗತವು!

( ೯ ಸ್ವಾಗತಂ, ಸ್ವಾತಂತ್ರ್ಯಭಾನು )

ರವಿಯು ಭಾಸಮಾನನಾದರೂ ರಾತ್ರಿಯ ರುದ್ರ ರಾಜ್ಯವು ಒಡನೆ ಮಾಯವಾಗದು. ಆದಕ್ಕಾಗಿ ಸೂರ್ಯನ ಸೈನಿಕರು ಕತ್ತಲೆಯ ಕಾಲಾಳುಗಳೊಡನೆ ಹೋರಾಡಬೇಕಾಗುವುದು. ಭಾರತದ ಉದ್ಧಾರಕ್ಕಾಗಿ ಭಾರತೀಯರು ಸ್ವಾತಂತ್ರ್ಯ ಸಂಗ್ರಾಮವನ್ನು ಹೂಡಬೇಕಾಯಿತು (೧೯೩೦). ಮಹಾತ್ಮಾ ಗಾಂಧಿಯವರು ಇದರ ಸಂಚಾಲಕರಾದರು. ಈ ಕದನದಲ್ಲಿ ಕರ್ನಾಟಕವು ತನ್ನ ಪಾಲನ್ನು ಎತ್ತಿಕೊಂಡಿತು. ನಮ್ಮ ಇಂದಿನ ರಾಷ್ಟ್ರೀಯ ಜೀವನದಲ್ಲಿಯ ಪಾವನ

ಪ್ರಸಂಗವಿದು. ಭಾರತೀಯರೆ, ಕನ್ನಡಿಗರೆ, ಈ ಶುಭಸಮಯದಲ್ಲಿ ಭಾರತದ ಜಯಜಯಕಾರ ಮಾಡಿರಿ. (೧೦ ಸುಮುಹೂರ್ತ)

ಅಚ್ಚರಿ, ಅಚ್ಚರಿ, ಸ್ವಾತಂತ್ರ್ಯದ ಸಂಗ್ರಾಮಭೂಮಿಯಾದ ಭಾರತವು ಲೋಕದ ರಂಗಭೂಮಿಯಾಯಿತು. ಭಾರತದಲ್ಲಿ ನಡೆಯುತ್ತಿರುವ ಅಪೂರ್ವವಾದ ಈ ಶಾಂತಿಸಮರವನ್ನು ನೋಡಲು ಪ್ರಪಂಚವು ಕುತೂಹಲಿಯಾಯಿತು. ರಾಷ್ಟ್ರಗಳ ಇತಿಹಾಸದಲ್ಲಿ ಅಶ್ರುತವಾದ ಅದ್ಭುತ ಯುದ್ಧವಿದು ! ವೈರವನ್ನು ಪ್ರೇಮದಿಂದ, ಅಸತ್ಯವನ್ನು ಸತ್ಯದಿಂದ, ಹಿಂಸೆಯನ್ನು ಅಹಿಂಸೆಯಿಂದ, ಆಕ್ರಮಣವನ್ನು ಅನಾಕ್ರಮಣದಿಂದ ಇದಿರಿಸುವ ಈ ಪ್ರಯೋಗವು ವಿಶ್ವವಿಸ್ಮಯಕಾರಿಯಾಗಿದೆ. ಸೋಲರಿಯದ ಈ ಸತ್ಯಸಮರಾಂಗಣದಲ್ಲಿ ಅಹಿಂಸಾವ್ರತಿಗಳಾದ ಶಾಂತಿವೀರರಿಗೆ ವಿಜಯವು ಸದಾ ಸಿದ್ಧವಾದುದು. (೧೧ ಇದು ರಂಗಭೂಮಿ)

ಶಾಂತಿಸಮರವು ಸಿದ್ಧಿಯನ್ನು ಸೂಚಿಸಿತು. ವಿಜಯಶ್ರೀಯು ಭಾರತೀಯರಿಗೆ ಒಲಿಯದಿರಳು. ಅನುಪಮವಾದ ಸಮರವನ್ನು ಸಂಧಿಸಿ ಜಯಶೀಲನಾಗಲಿರುವ ಜನನಾಯಕನನ್ನು ಮೆಚ್ಚಿದ ಜಯಲಕ್ಷ್ಮಿಯು ಜಯಮಾಲೆಯನ್ನು ಹಿಡಿದುಕೊಂಡು ಬಂದಳು. ತ್ಯಾಗಪೂರನು, ಯೋಗಧೀರನು, ಕರ್ಮವೀರನು ಆಗಿ ಭಾರತೀಯ ಜನಾಂಗವನ್ನು ಪುನರುಜ್ಜೀವನಗೊಳಿಸಿದ ಇಂದಿನ ಈ ಭಾರತೀಯ ಮಹಾ ವಿಭೂತಿಯು (ಮಹಾತ್ಮಾ ಗಾಂಧಿ) ಈ ಜಯಮಾಲೆಗೆ ಅತ್ಯರ್ಹನಲ್ಲವೆ? (೧೨ ಜಯಮಾಲೆ)

ನವೋದಯದ ಈ ನವಯುಗದಲ್ಲಿ ನಮ್ಮ ತಾಯಿಯ ನಾಮವು ನಮ್ಮ ನಾಲಗೆಯ ಮೇಲೆ ನಲಿಯುತಲಿರಲಿ; ಅದುವೆ ನಮಗೆ ಚಿರಂತನ ಸ್ಫೂರ್ತಿ; ಸಂತತಶಕ್ತಿ ! ಅದುವೆ ನಮ್ಮ ಮಂತ್ರ ! ಅದನ್ನು ಜಪಿಸಿ ಜಯಿಗಳಾಗುವ. (೧೩ ಜಯಕರ್ನಾಟಕ)

ಚಿತ್ರಸೃಷ್ಟಿ

## ೧ ಕನ್ನಡಂ

ಕನ್ನಡಂ ತಂಗೊಳದ ಮೆಲ್ಲೆಲರ ನಲ್ಮೋಂಕು !
ಕನ್ನಡಂ ಮಾವಿನೆಳದಳಿರ ಸೊಗಯಿಪ ನುಣ್ಪು !
ಕನ್ನಡಂ ಕನ್ನಡಂ ಪೊಸವೂವ ಮೆಲ್ಪು ! ನವಜವ್ವನೆಯ ಕದಪಿನೊಳ್ಪು!

ಕನ್ನಡಂ ಬಿರಿವೂವ ಬಳಿಯ ತುಂಬಿಯ ಸರಂ !
ಕನ್ನಡಂ ನರುಗಂಪು ಬೆರೆದಿಂಪುಗರೆವ ಜೇನ್ !
ಕನ್ನಡಂ ಕನ್ನಡಂ ನರುದಂಬುಲಂ ಮೆಲ್ದ ಸರಸತಿಯ ಚೆನ್ನುಸಿರಲೇ! ||೧||

ಅಕ್ಟೋಬರ ೧೯೩೯

ಚಿತ್ರಸೃಷ್ಟಿ

## ೨ ಕನ್ನಡವು

ನಿನ್ನಿನದು ನುಡಿಯಲ್ಲ, ಮೊನ್ನಿನದು ನುಡಿಯಲ್ಲ
ಕನ್ನಡವು ! ನುಡಿದರಿದನಾಪುರಾತನರೊಸೆದು !

ಇದು ಶಕ್ತಿಯಿದು ವೀರವಾಣಿಯೀ ಕನ್ನಡವು !
ಇದು ಗೆಯ್ದ ಗೆಯ್ಮೆ ವಿಶ್ವಕ್ಕೆ ವಿಸ್ಮಯಕರವು !

ಇದಕೊಂದು ರೂಪುಂಟು, ಬಗೆಯುಂಟು, ಚೆಲ್ವುಂಟು !
ಇದಕೆ ಮಾರ್ದವವುಂಟು, ಕಾಠಿಣ್ಯವಿದಕುಂಟು !

ಇದು ನೃಪೋತ್ತುಂಗ ನೃಪತುಂಗನಿಗೆ ಮೆಚ್ಚಿನದು !
ಇದು ಜಗದ್ವಂದ್ಯಕವಿಪಂಪನಿಗೆ ಮೆಚ್ಚಿನದು !

ಇದು ಭಕ್ತ ಬಸವೇಶನೊಲಿದೊಲಿದು ನುಡಿದ ನುಡಿ !
ಇದು ಪೂಜ್ಯದಾಸರಾದರದಿಂದೆ ನುಡಿದ ನುಡಿ !

ಇದು ಕುಮಾರವ್ಯಾಸರಳ್ಕರಿನ ನುಡಿಯಲ್ತೆ ? !
ಇದುವೆ ತಾಯ್ನುಡಿ ವೀರ ಹುಕ್ಕಬುಕ್ಕರಿಗಲ್ತೆ ?

ಆದರದೆ ಬಂದು ತಲೆವಾಗಿರಿದಿರಿದಿರಲ್ಲಿ !
ಸೋದರರೆ, ಬಂದು ತಲೆವಾಗಿರಿದಿರಿದಿರಲ್ಲಿ !

ನವ್ಹೆಂಬರ ೧೯೩೬

## ೩ ತಾಯ್ನಾಡು

ಕನ್ನಡನಾಡಿನಲಂಪಂ ಬಣ್ಣಿಸ-
ಲೆನ್ನಳವೇ ? ಸೈಪಿಗೆ ಕಣಿಯರಕೆಡೆ
ಪನ್ನತಿಕೆಗೆ ಮನೆ ಬಿನ್ನಣಕೋವರಿ ಸೊಂಪಿಂಗಿಕ್ಕೆಯದು !
ನನ್ನಿಗೆ ತಾಯ್ವೊಲಮಿಂಪಿಗೆ ತಾಣಂ
ಚೆನ್ನಿಗೆ ಮೊದಲಕ್ಕರತೆಗೆ ನೆಲೆವೀ-
ಡಿನ್ನೇವೇಳ್ವೆಂ ಪೆಂಪೆಂಗಿಂಬೆನ್ನಳ್ತಿಯ ತಾಯ್ನಾಡು ! ||೧||

ಬಿನಯಕೆ ನೆಲನೈಸಿರಿಗಾಡುಂಬೊಲ-
ಮನುನಯಕಾಗರಮೊಳ್ಪಿಗೆ ಚಾವಡಿ
ಬಿನದಕೆ ಬೀಡರಿವಿಂಗಾರವೆ ಗಾಡಿಗೆ ಗೊತ್ತೊಲವಿಂಗೆ !
ಬನವೋಜೆಗೆ ನಿಲಯಂ ಸಿಂಗರಕೊ-
ಳ್ವನೆ ಬಿಜ್ಜೆಗೆ ಕರುವಾಡಂ ತಾನೆಂ-
ಬಿನಮೇಂ ಬಗೆಗೊಳಿಸುವುದೋ ಈಯೆನ್ನಳ್ತಿಯ ತಾಯ್ನಾಡು ! ||೨||

ತಿರೆಯೊಳಗಾವುದು ಕನ್ನಡ ನಾಡಿಗೆ
ದೊರೆ ಪೆರತಿರ್ಪುದು ? ತತ್ವಜ್ಞರ ಭ-
ಕ್ತರ ಸಚ್ಚರಿತರ ವಸತಿಸ್ಥಳಮದು ಸಿರಿಗನ್ನಡನಾಡು !
ಪರಿದೊರೆ-ತಿಳಿಗೊಳ-ಪೊಸಬನ-ಬೆಳೆವೊಲ-
ನರುವೂ—ಪಾಲ್ದೆನೆ—ತನಿವಣ್ಗಳಿನನ-
ವರತಂ ಮೆರೆವುದು ಸಗ್ಗಕೆ ಮಿಗಿಲೆನ್ನಳ್ತಿಯ ತಾಯ್ನಾಡು ! ||೩||

ಚಿತ್ರಸೃಷ್ಟಿ

ಎನಿತೊಂದೆನ್ನಯ ಪೂರ್ವದ ಸುಕೃತವೊ!
ಜನಿಸಿದೆನಾಂ ಪೆರ್ಮೆಯ ಕನ್ನಡ ನಾ-
ಡಿನ ನೆಲದೊಳ್, ಕನ್ನಡನುಡಿಯುಗ್ಗಳದಮರ್ದಂ ಸವಿದಪೆನು!
ಅನುಪಮಮಾದೀ ನಾಡಿನ ನಲ್ಬೊಬ-
ಗಿನ ಕಡಲೊಳಗೊಲವಿಂದೋಲಾಡುತು-
ಮನುದಿನದೊಳ್ ನಲಿನಲಿದಪೆನೀ ಚೆಲ್ವಿನ ಕರುನಾಡಿನೊಳು! ||೪||

ಜೂನ ೧೯೨೬

ಚಿತ್ರಸೃಷ್ಟಿ

# ೪ ವಿಜಯದುಂದುಭಿ

ಉರಿಯುತುಂ ಭುಗಿಲೆನುತೆ ನೀಡಿ ನಾಲಗೆಗಳಂ
ಕರುಣೆದೊರೆವಳವಿನೊಳ್ ಬಂದುದಂ ತನ್ನೊಡಲೊ-
ಳಿರಿಸುತುಂ ಬೇಯಿಸುತೆ ನಾಡನಕಟಾ ಮಸಣನಾಗಿಸುತೆ ಜೀಗೆ ಬಲಿದು
ಪರಿದತ್ತು ಕರ್ವೊಗೆಯನೆತ್ತಲುಂ ತೂರುತುಂ!
ಮುರುಟಿದತ್ತುತ್ಸವಂ! ಕಂದಿದುದು ಸಂಪದಂ!
ಬರಡಾಯ್ತು ಜೀವಲತೆಯೊಗೆಯೆ ಹಾಹಾರವಂ ಬಯಲಾಯ್ತು
ಭಾಗ್ಯದೇಳ್ಗೆ! ||೧||

ಉರಿಯ ಕಾಯ್ಪಿಗೆ ಸುಗಿದು ನಡುಗುತುಂ ಜನಮಕಟ
ಅರಿವಳಿದು ಮುಂದುಗಾಣದೆ ನಮೋ ಎಂದುದೈ!
ಮರೆತು ಪಿಂತಭಿಮಾನಮೂರ್ತಿಯಾಗಿರ್ದುದಂ ಬಾಗಿರಲ್ ಬಗೆದಂದುದು!
ಪೆರತಾವುದಿನ್ನಿಂತು ದುರ್ಭಾಗ್ಯಮಿದನುಳಿದು?
ನರವರರ ಸಂತತಿಗೆ ಸದೃಶವೇ ಇರವಿಂತು?
ಮರಣಕಂಜಿದರಲ್ತೆ ಪಂದೆಗಳ್! ಪಣೆಗೆ ಮಣ್ಣೊಡೆಯಲ್ಕೆ
ಪೇಸರಲ್ತೇ? ||೨||

ಬದುಕಲೆಳಸಿದರಕಟ ಪಲ್ಗಳೊಳ್ ಪುಲ್ಗಚ್ಚಿ!
ಬದುಕಲೆಳಸಿದರಕಟ ನೀನೆ ಶರಣೆಂದರಿಗೆ!
ಬದುಕಲೆಳಸಿದರಕಟ ಧರ್ಮಮಂ ಸಂಸ್ಕೃತಿಯನಾತ್ಮಮಂ ಮಾರಿ ರಿಪುಗೆ!
ಬದುಕಲೆಳಸಿದರಿಂತು ಬಾಳ್ವೆಣಗಳಾಗಿ! ಬಿ-
ಳ್ದುದು ದೇಶಮವನತಿಯ ಕುಳಿಯೊಳೊರಲುತುಮಿದೇ-
ನೊದವಿದುದು ತನಗೆಂದು ನರಲುತುಂ ಪಗೆಯ ಪಿಸುಣೊಡರಿಸಿದ
ನೋವಿಗಳ್ಕಿ! ||೩||

ಚಿತ್ರಸೃಷ್ಟಿ

ಜನನಿ ಭೂಜನನಿ ಭಾರತಜನನಿ ಘೋರವೇ–
ದನೆಯಿಂದೆ ಬಳಲುತಿರೆ, ರಿಪುವತ್ತಲವಳ ಜೀ-
ವನವನೇ ಪಿಳಿದು ಪೀರಲ್ ಬಗೆದು ಬಂದನುದ್ದಂಡನತಿದರ್ಪದಿಂದೆ
ತನಗಾವ ಗಂಡುಸಿದಿರೆನುತೆ! ಕರುನಾಡಿಗೀ-
ತನ ಸೊರ್ಕಿನುರಿ ಸೋಂಕೆ, ದಾಹಾತ್ಮಕಂ ತೇಜ-
ಮನುಪಮಂ ಪ್ರಕಟಮಾದತ್ತು ದುರ್ಮದಮದಪ್ರಧ್ವಂಸಿ ದಿವ್ಯಶಕ್ತಿ! ॥ ೪ ॥

ಅದೊ ಧರ್ಮಮೂರ್ತಿ ಸಂನ್ಯಾಸಿವಿಭು ಮೇಲಕೆ-
ತ್ತಿದನಾತ್ಮದಂಡಮಂ! ಚೈತನ್ಯಮೇಂ ಸ್ಫುರಿಸಿ-
ದುದೊ ನಾಡೊಳೆಲ್ಲಿಯುಂ! ದೌರ್ಬಲ್ಯಮಳಿದತ್ತು, ವೀರರಸಮುರ್ಕಿದತ್ತು !
ಸದಭಿಮಾನಜ್ಯೋತಿ ಕರುನಾಡ ಚೆನ್ನಿಗರ
ಹೃದಯದೊಳ್ ಬೆಳಗಿದತ್ತುಜ್ಜ್ವಲಂ! ಪ್ರಸ್ಫುರ-
ದ್ವದನರೇಂ ಮೃತ್ಯುಭಯಮಂ ತಿರಸ್ಕರಿಸಿದರ್ ತಾವೆಂಬುದಂ
ತೋರ್ದರೋ! ॥೫॥

ಇದಿರಾರವರ್ಗೆ ಜಗದೊಳ್ ವಜ್ರಮುಷ್ಟಿಗ-
ಳ್ಗಿದಿರಾರೊ? ಕರುನಾಡಿನುಜ್ಜ್ವಲತ್ತೇಜಕಾ-
ರಿದಿರೊ? ಪುಣ್ಯಕ್ಕಿದಿರೆ? ಭಾರತದ ಸತ್ವಾಪಹರಣಮಂ ಮಾಡಲೆಳಸಿ
ಕುದಿಕುದಿದು ಶತ್ರು ಹತಸತ್ವನೆಲ್ಲಿಯೊ ಬಿಳ್ದ-
ನಿದಿರಾರೊ ಉದಯೋನ್ಮುಖರ್ಗೆರಪ ಬಲ್ಸಿಡಿ-
ಲ್ಗಿದಿರಾಗಿ ಬೆಂದು ಸೀಕರಿವೋಗದಾರವರ್ ಬದುಕಿದರ್ ವಿಶ್ವದಲ್ಲಿ? ॥೬॥

ಕರುನಾಡು ತಡೆದು ತೊತ್ತಳದುಳಿದು ರಿಪುಬಲಮ-
ನಿರಿದಿಕ್ಕಿದುದು! ವಿಜಯದುಂದುಭಿಯ ನಿಸ್ವನಂ
ಪರಿದತ್ತು ದೆಸೆಗಳೊಳ್! ವಿಜಯನಗರದ ಜಯಧ್ವಜಮುಚ್ಛ್ರಿತಂ
ಮಿಳಿರುತೆ

ಚಿತ್ರಸೃಷ್ಟಿ

ಮೊರೆದತ್ತು ! ಕರುನಾಡಿನೂರ್ಜಸ್ವಲಂ ಯಶಂ
ಸುರುಚಿರಂ ದಿಕ್ಕನ್ಯೆಯರ ಮುಖಂಗಳ್ಗದೇಂ
ಮಿರುಗನಿತ್ತುದೊ ! ನವೋ ಸ್ವಾಭಿಮಾನಜ್ಯೋತಿ ! ನೀಂ
ಪರಾತ್ಪರಶಕ್ತಿಯೈ !   ॥ ೭ ॥

**ಅಕ್ಟೋಬರ ೧೯೩೬**

## ೫ ಹಂಬಲು

ಆವಿನದು ನೊರೆಹಾಲನೊಲ್ಲೆನು,
ದೇವಲೋಕದ ಸುಧೆಯನೊಲ್ಲೆನು,
ದೇವಿ, ನಿನ್ನಯ ನಾಮದನುಪಮ ರುಚಿಯನರಿತಿಹೆನು !
ಪಾವನೆಯೆ, ನಿನ್ನಂಘ್ರಿಕಮಲದ
ಸೇವೆ ದೊರೆತಿಹುದೆನಗೆ, ತಾಯೇ,
ಶ್ರೀವರನ ದಯೆಯಿಂದೆ ! ಮತ್ತಿನ್ನೇನು ಬೇಡೆನಗೆ ! ||೧||

ಬರಲಿ ಬ್ರಾಹ್ಮಣರಲ್ಲಿ ಜನ್ಮವು,
ಬರಲಿ ಮಾದಿಗರಲ್ಲಿ ಇಲ್ಲವೆ,
ಇರದು ದುಗುಡವು ! ತಾಯೆ, ನಿನ್ನುದರದಲಿ ಜನಿಸುವುದೇ
ಪರಮಭಾಗ್ಯವದೆಂದು ತಿಳಿಯೆನೆ ?
ಮರೆಯದಲಿ ಪ್ರತಿಜನ್ಮದಲಿ ಶ್ರೀ-
ಧರನು ನಿನ್ನುದರದಲಿ ಹುಟ್ಟಿಸಲೆನ್ನನನುನಯದಿ ! || ೨ ||

ಇರಲೆನಗೆ ಕರಿಕನ್ನವುಣ್ಣಲು,
ಬರಿಯ ನೆಲವಿರಲೆನಗೆ ಮಲಗಲು,
ಹರುಕು ಬಟ್ಟೆಗಳೆನ್ನ ಮೆಯ್ಯನು ಮುಚ್ಚಲಿರಲೆನಗೆ
ಮುರುಕು ಗುಡಿಸಲು ವಾಸಕಿರಲೈ !
ಸಿರಿಯರಸ, ಮತ್ತೇನನೊಲ್ಲೆನು !
ಭರತಭೂಮಿಯೊಳಿರುವುದೇ ಎನಗೊಂದು ಸುಖವಿಹುದು ! ||೩||

ಚಿತ್ರಸೃಷ್ಟಿ

ಧನವ ಬೇಡೆನು ನಾನು, ದೇವಾ,
ನಿನಗೆ ಸನ್ಮಾನವನು ವಿದ್ವ-
ಜ್ಜನರ ಸಭೆಯೊಳು ಬೇಡೆನೈ, ನಾ ಬೇಡೆ ಕೀರ್ತಿಯನು !
ಕನಸುನೆನಸಿನಲಿರಲಿ, ಕರುಣಾ-
ಘನನೆ, ಎನ್ನಯ ಜನ್ಮಭೂಮಿಯ
ನೆನೆಹು ! ಸತತವು ಸವೆಯಲೀ ತನುವವಳ ಸೇವೆಯಲಿ ! ||೪||

೧೯೧೬

## ೬ ಭರತಭೂಮಿ

ಎನಿತು ಪುಣ್ಯವನು ಮಾಡಿದೆನೊ ನಾನು !
ಜನಿಸಿದೆನು ನಾನಿಲ್ಲಿ ಭರತಭೂಮಿಯೊಳು ! || ಪಲ್ಲವಿ ||

ಅಲೆವ ಹೆದ್ದೆರೆಗಳಿಂದೆಸೆಯುತುದ್ಘೋಷಿಸುವ
ಜಲಧಿ ಮೂರೆಡೆಗಳಲಿ ಬಳಸಿ ನಿಂದು
ನಲಿನಲಿದು ನನ್ನ ನಾಡಿನ ಕೀರ್ತಿಗೀತೆಯನು
ಚೆಲುವಾಗೆ ಹಗಲಿರುಳು ಹಾಡುತಿಹುದು ! ||೧||

ಹಿಮಶೈಲವೆನ್ನ ನಾಡಿನ ಪುಣ್ಯಚಾರಿತ್ರ್ಯ–
ರಮಲಕೀರ್ತಿಯ ಧವಲಕಾಂತಿಯನು ತಳೆದು
ಅಮಿತರತ್ನಪ್ರಭವವಾಗಿ ಕಂಗೊಳಿಸುವುದು
ಕಮಲಜನ್ಮನ ಸೃಷ್ಟಿ ಕೌಶಲದ ಬೀಡು ! ||೨||

ಹರಿಯುತಿರುವುವು ಸುಧಾಸುಂದರೋದಕದ ನಿ–
ರ್ಝರಣಿಗಳು ನದನದಿಗಳೆಲ್ಲೆಲ್ಲಿಯೂ
ತೆರತೆರದ ಬೆಳೆಗಳಿಂದೆತ್ತಲೂ ಹಸುರೇರಿ
ಧರೆಯೆನ್ನ ನಾಡಿನೊಳು ರಾಜಿಸುವುದು ! ||೩||

ಎಲ್ಲಿರುವುದೀಬಗೆಯ ಸೊಂಪಿನಿಂಪಿನ ನಾಡು ?
ಬಲ್ಲವರ ತಾಯ್ನಾಡು ನನ್ನ ನಾಡು !
ಎಲ್ಲ ಸಂಪದಕೆನ್ನ ತಾಯ್ನಾಡು ನೆಲೆವೀಡು, !
ಬಲ್ಲಿದರ ನಾಡು ಪಾವನರ ನಾಡು ! ||೪||

ಭರತಭೂಮಿಯೆ ಇರಲಿ ತಾಯ್ನಾಡು ! ನನ್ನ ತನು
ಭರತಭೂಮಿಯ ಸೇವೆಯಲಿ ಸವೆಯುತಿರಲಿ !
ಭರತಭೂಮಿಯ ದಿವ್ಯನಾಮಸುಧೆ ನಾಲಗೆಯ-
ಲಿರಲಿ, ದೇವರ ದೇವ, ಜನ್ಮ ಜನ್ಮದಲಿ ! ||೫||

೧೯೨೯

## ೭ ನಮ್ಮ ಧ್ವಜವು (೧)

ಉನ್ನತಿಯ ಮಾರ್ಗವನು ತೋರುವುದು ಧ್ವಜವು
ಉನ್ನತವು ಧವಲವೀ ನಮ್ಮ ಧ್ವಜವು ||ಪಲ್ಲವಿ||

ತೇಜಸ್ವಿ ನಾಡು, ನುಡಿ ತೇಜಸ್ವಿ, ನಮ್ಮ ಗುರಿ
ತೇಜಸ್ವಿ, ತೇಜಸ್ವಿ ಇತಿಹಾಸವು
ತೇಜಸ್ವಿ ನಮ್ಮ ಸಂಸ್ಕೃತಿ, ನಮ್ಮ ಹೊಸದಾರಿ
ತೇಜಸ್ವಿ, ತೇಜಸ್ವಿ ನಮ್ಮ ಹಾಡು! ||೧||

ತೇಜಸ್ವಿ ಶಾಲೆ, ಗುರು ತೇಜಸ್ವಿ, ವಿದ್ಯಾರ್ಥಿ
ತೇಜಸ್ವಿ, ತೇಜಸ್ವಿ ಅಧ್ಯಯನವು
ತೇಜಸ್ವಿ ನಮ್ಮ ಮಂತ್ರವು, ನಮ್ಮ ಶಾಸವವು
ತೇಜಸ್ವಿ, ತೇಜಸ್ವಿ ನಮ್ಮ ಧ್ವಜವು ||೨||

ಓಜಸ್ಸು ತೇಜಸ್ಸು ಸತ್ವಪೋಷಕವೆಂದು
ಓಜಸ್ವಿ ತೇಜಸ್ವಿಯಾಗಿರೆಂದು
ಓಜಸ್ವಿ ನಮ್ಮ ಧವಲಧ್ವಜವು ಹರಸುವುದು
ಸೌಜನ್ಯವನು ನಮಗೆ ಕಲಿಸುತೊಲಿದು ||೩||

ಎಪ್ರಿಲ ೧೯೩೦

ಚಿತ್ರಸೃಷ್ಟಿ

# ೮ ನಮ್ಮ ಧ್ವಜವು (೨)

ಇದು ತಪೋನಿಧಿ ಗಾಂಧಿ ಕಲ್ಪಿಸಿದ ಧ್ವಜವು
ಇದು ಭರತಸಂತತಿಯ ಸರ್ವಸ್ವವು ! ||ಪಲ್ಲವಿ||

ಇದು ನಮ್ಮ ನಾಡಿನಧ್ಯಾತ್ಮಶಕ್ತಿಧ್ವಜವು
ಇದು ನಮ್ಮ ತಾಯ್ನಾಡ ಸೌಭಾಗ್ಯವು
ಇದು ನಮ್ಮ ನಾಡ ಪುಣ್ಯ ಪ್ರಕರ್ಷಧ್ವಜವು
ಇದು ನಮ್ಮ ತಾಯ್ನಾಡ ಚೈತನ್ಯವು ! ||೧||

ಇದರ ದರ್ಶನವೆಮಗೆ ಪರಮಪುಣ್ಯಪ್ರದವು !
ಇದರಿಂದೆ ತೇಜಸ್ಸಿನುತ್ಕರ್ಷವು
ಇದರ ನೆರಳೊಳೆ ನಮ್ಮ ಸ್ವಾತಂತ್ರ್ಯಮಂದಿರವು
ಇದರಿಂದೆಯೇ ವಿಶ್ವದಭ್ಯುದಯವು ! ||೨||

ಇದರ ರಕ್ಷಣದಿಂದೆ ನಮ್ಮ ಸಂರಕ್ಷಣವು !
ಇದರ ಮಾನವು ನಮ್ಮ ಸನ್ಮಾನವು !
ಇದರ ಪಾವನಕೀರ್ತಿ ಸಕಲಭುವನವ್ಯಾಪಿ !
ಇದು ಜಗಕೆ ಮಂಗಲವು ನಮ್ಮ ಧ್ವಜವು ||೩||

ಎಪ್ರಿಲ ೧೯೩೦

ಚಿತ್ರಸೃಷ್ಟಿ

## ೬ ಸ್ವಾಗತಂ ಸ್ವಾತಂತ್ರ್ಯಭಾನು !

ಇದೊ ಇದೋ ಸ್ವಾತಂತ್ರ್ಯರವಿಯುಖಿಲ ವೈಭವದಿ –
ನುದಯಿಸಿದನೆಮ್ಮ ರಾಷ್ಟ್ರದ ನಭದೊಳಿಲ್ಲಿ ನೆಲ-
ಸಿದ ದಾಸ್ಯದಂಧಕಾರಮನಾತ್ಮಕಿರಣಂಗಳಿಂದೊತ್ತಿಯಂಡಲೆಯುತೆ
ಇದೊ ಇದೋ ದಿಗ್ವಲಯಮಂ ಪಳಂಚಲೆಯುತೇ-
ಳ್ವುದು ಗಗನದೊಳ್ ಭರತಸಂತಾನಕಂಠದಿಂ –
ದೊದವಿದುದ್ಘೋಷಣಂ ! ಸ್ವಾಗತಂ, ಸಾತಂತ್ರ್ಯಭಾನು !
ಚೈತನ್ಯದಾತಾ ! ||೧||

ಜಾನೆವರಿ ೧೯೩೦

ಚಿತ್ರಸೃಷ್ಟಿ

# ೧೦ ಸುಮುಹೂರ್ತ

ಇಂದು ಸುಮುಹೂರ್ತದೊಳ್ ಸ್ವಾತಂತ್ರ್ಯ ಸಂಗ್ರಾಮ-
ಕೆಂದು ನಡೆದಂ ಗಾಂಧಿ ದಾಸ್ಯದಾವಾಗ್ನಿಯಂ
ನಂದಿಸಲ್ ! ಸಕಲ ದಿಗ್ವಲಯಮೇಂ ಸುಪ್ರಸನ್ನಮೊ ! ಅದೇಂ
ಸೃಷ್ಟಿದೇವಿ

ಸೌಂದರ್ಯಸಾರಸರ್ವಸ್ವದಿಂದೊಂದಿಯಾ-
ನಂದದಿಂದೆತ್ತಲುಂ ಬೀರುವಳೊ ಮೃದುಹಾಸ್ಯ-
ದಂದಮಂ ! ಮಧುರಮಂಗಳಗೀತಿನಿನದಮೇಂ ಶ್ರುತಿರಸಾಯನ
ಮಾದುದೋ ! ॥೧॥

ನಡೆಯಿಮೆಲೆ ಕರುನಾಡ ಚಿಣ್ಣರಿರ, ಪುಣ್ಯಾತ್ಮ-
ನೊಡನೆ ! ಬಂದುದು ಜನ್ಮಪಾವನಂ ಸಂಗ್ರಾಮ-
ಮೊಡಲಾಸೆಯೆಮಗೇಕೆ ಕನ್ನಡದ ಕಲಿಗಳ್ಗೆ ? ಸಂಕಲೆಗಳಂ ಜನನಿಯಾ
ಕಡಿದು ಪುಡಿಗುಟ್ಟುತವಳಶ್ರುಧಾರೆಯನಿಂದು
ತೊಡೆಯಲೆಮಗವಸರಂ ಭಾಗ್ಯದಿಂ ಬಂದುದೈ!
ಅಡಿಯಿಡಿಂ ಮುಂದಿನ್ನು ಜಯಜಯಧ್ವನಿಯಿಂದೆ ದೆಸೆದೆಸೆಗಳಂ
ತುಂಬುತೆ ! ॥೨॥

೧೨ ಮಾರ್ಚ ೧೯೩೦

ಚಿತ್ರಸೃಷ್ಟಿ

## ೧೧ ಇದು ರಂಗಭೂಮಿ

ಇದು ರಂಗಭೂಮಿ ಭಾರತಭೂಮಿ, ವಿಶ್ವಪತಿ-
ಯಿದಕೆಲ್ಲೈ ಸೂತ್ರಸಂಚಾಲಕಂ ! ನಡೆದಿರ್ಪು –
ದಿದರೊಳಿದೊ ನಾಟಕಂ ವಿಶ್ವವಿಸ್ಮಯಕಾರಕಂ ಶಾಂತಿಸಂಗ್ರಾಮದಾ !
ಇದರೊಳೂರ್ಜಸ್ವಿ ಧೀರೋದಾತ್ತನಾತಪಃ–
ಸದನಂ ಸ್ಥಿತಪ್ರಜ್ಞನಖಿಳರಾಷ್ಟ್ರಪ್ರಾಣ-
ಪದಕಂ ಬೃಹತ್ಕೀರ್ತಿ ಮೋಹನಂ ನಾಯಕಂ ಸಹೃದಯಂ
ವಿನಯಾಂಬುಧಿ ! ||೧||

ಜೂನ ೧೯೩೦

ಚಿತ್ರಸೃಷ್ಟಿ

# ೧೨ ಜಯಮಾಲೆ

ಸುರುಚಿರಂ ನರುಗಂಪು ! ಬಗೆಗಮೃತವರ್ಷಮನೆ
ಕರೆವ ನರುಗಂಪಿದರ ಪರ್ಬುಗೆಗೆ ದೆಸೆಗಳೆಡೆ–
ನೆರೆಯವ್ವೆ ! ಇದೊ ಇದೋ ವಿಶ್ವಮಂ ಕಿರುನಗೆಯ ತಂಬೆಳಕಿನಿಂದೆ
ಪೊರೆದು ನಿಂತಿರ್ದಪಳ್ ವೀರವತ್ಸಲೆ ಮನೋ–
ಹರಮೂರ್ತಿ ಜಯಲಕ್ಷ್ಮಿ ಪುಣ್ಯನಿಲಯನ ಕೊರಲೊ-
ಳಿರಿಸಲ್ಕೆ ದಿವ್ಯಸುಮಮಾಲೆಯಂ ಪಿಡಿದು ! ಕಂಪೆನಿತಿದ್ಧೆ
ಜಯಮಾಲೆಯಾ ! ||೧||

ಇವನಡಿಗೆ ಬಾಗಿಮೆಲೆ ಧೈರ್ಯಮೇರುವಿನಡಿಗೆ
ಭುವನೈಕಸತ್ಯಸಂಗರನಡಿಗೆ ದೀನಬಂ–
ಧುವಿನಡಿಗೆ ಶಾಂತಿಸಾಗರನಡಿಗೆ ಋಜುವೃತ್ತಿಯಡಿಗೆ ನಿರ್ದ್ವಂದ್ವನಡಿಗೆ;
ಅವಿಚಲವ್ರತಿಧುರಂಧರನಡಿಗೆ ವಿಶ್ವಬಾಂ–
ಧವನಡಿಗೆ ಜಿತಸಂಗನಡಿಗೆ ನಿರ್ಮಮನಡಿಗೆ
ಸುವಿಶಾಲಮತಿಯಡಿಗೆ ನಿತ್ಯಸತ್ವಸ್ಥನಡಿಗೀಸ್ಥಿತಪ್ರಜ್ಞನಡಿಗೆ ! ||೨||

ಇವನ ಪುಣ್ಯಪ್ರಭಾವದಿನಲ್ತೆ ಎಮಗೆ ಸಂ–
ಭವಿಸಿದುದು ವಿಜಯಲಕ್ಷ್ಮಿಯ ಪುಣ್ಯದರ್ಶನೋ–
ತ್ಸವಮಿಂದು ! ದಾಸ್ಯವಿಷಶುಷ್ಕಾಂಗಿಗಿವನಲ್ತೆ ಸಂಜೀವನಂ ಜನನಿಗೆ ?
ಇವನ ತಪದಿಂದಖಿಲ ವಿಶ್ವಕಲ್ಲವೆ ಶಾಂತಿ ?
ಇವನಿಂದಮುತ್ಸಾಹವೈ ಭರತಸಂತಾನ-
ಕಿವನಿಂದೆ ಭಾಗ್ಯೋದಯಂ ! ನಿನ್ನ ಜಯಮಾಲೆಯೇಂ ಕೃತಿಯೊ
ವಿಜಯಲಕ್ಷ್ಮೀ! ||೩||

೧೪ ಮಾರ್ಚ ೧೯೪೦

ಚಿತ್ರಸೃಷ್ಟಿ

## ೧೩ ಜಯ ಕರ್ನಾಟಕ

ಜಯ ಕರ್ನಾಟಕವೆಂಬೀ ಮಂತ್ರದ
ಜಯಘೋಷವು ದೆಸೆಗಳೊಳಿಡಿಕಿರಿದಿರೆ,
ಜಯಪಥದೊಳು ಕನ್ನಡನಾಡನುಗೊಂಡಿರುತಿರೆ, ನಲವೆರ್ಚಿ
ಜಯ ಜಯ ಜಯ ಕರ್ನಾಟಕ ಜಯ ಜಯ
ಜಯವೆಂದಮರರು ವಿಜಯಧ್ವನಿಗುಡೆ
ಜಯರವಿ ಕನ್ನಡಬಾನೊಳಗುದಯಿಸೆ ಪೆಂಪೇನೊದವಿದುದೋ! ॥

ನವೆಂಬರ ೧೯೨೬

ಚಿತ್ರಸೃಷ್ಟಿ

# ಪರಿವಿಡಿ

ವಿಶ್ವದ ಅನಂತ ಅವಿದಿತ ಶಕ್ತಿಗಳ ಸ್ವಚ್ಛಂದ ಆವಿರ್ಭಾವವು ಪ್ರಕೃತಿ. ಪ್ರಕೃತಿಯ ಸೂಕ್ಷ್ಮ, ಸಂಸ್ಕೃತ, ಸಂವೇದನಾತ್ಮಕ ಕೃತಿ ಮಾನವನು.

ಸೃಷ್ಟಿಯ ವಿವಿಧ ವಿಲಾಸಗಳು ಮನನಶೀಲ ಮಾನವನ ಮತಿಯನ್ನು ಪ್ರೇರಿಸುವುವು. ಪ್ರಕೃತಿಯ ಚಿತ್ರಮಯ ಸಂವಿಧಾನಗಳು ಭಾವನಾಪ್ರಚುರ ಮನುಜನ ಮನೋವೃತ್ತಿಯನ್ನು ಉನ್ಮೀಲಿಸುವುವು.

ಕವಿ ವಿಶ್ವಧರ್ಮಿ; ಕಲಾಜೀವಿ. ಆತನಿಗೆ ಪ್ರಕೃತಿಯಲ್ಲಿ ಅಧಿಕವಾದ ಸೌಹಾರ್ದ; ನಿಸರ್ಗದಲ್ಲಿ ನಿಕಟವಾದ ಬಾಂಧವ್ಯ. ಆತನು ನಿಸರ್ಗದ ನೆರೆಯಲ್ಲಿ ಸಂಚರಿಸುವಾಗ ಗೋಚರಿಸುವ ಸಂನಿವೇಶಗಳು ಅಪೂರ್ವವಾದುವು; ಅನುಭವಿಸುವ ಭಾವನಾತರಂಗಗಳು ವಿಧವಿಧವಾದುವು.

ಅಮಿತಗತಿಯಾದ ನಿಸರ್ಗವು ಕಾಲಕಾಲಕ್ಕೆ ಅನೇಕ ರೂಪಗಳನ್ನು ಪ್ರಕಟಿಸುವುದು; ಒಮ್ಮೆ ಭೀಷಣ, ಇನ್ನೊಮ್ಮೆ ಸೌಮ್ಯ, ಒಮ್ಮೆ ಪ್ರಸನ್ನ, ಮಗದೊಮ್ಮೆ ರಮ್ಯ. ಇವುಗಳ ಪ್ರತಿಬಿಂಬನೆಗೆ ಅನುಗುಣವಾಗಿ ಕವಿಹೃದಯವು ರುದ್ರ, ಶಾಂತ, ಚಿತ್ರ, ಸುಂದರ ಭಾವಗಳಿಂದ ರಸರಂಜಿತವಾಗುವುದು.

## ರುದ್ರ

ಉಷ್ಣದೇಶದಲ್ಲಿ ಉಷ್ಣಕಾಲದ ಉಲ್ಬಣವು ಉಗ್ರವಾದುದು. ಇದರ ಬಾಧೆಯಿಂದ ಸಸ್ಯ–ಪ್ರಾಣಿಗಳು ಬಸವಳಿದು ಬತ್ತುವುವು.
(೧ ಬೇಸಗೆ)

ಬೇಸಗೆಯ ಬೇಗೆ ಭೀಕರವಾಗಿ ವಿಶ್ವವನ್ನು ವ್ಯಾಪಿಸುವುದು.
(೨ ಬೇಸಗೆ)

ಬೇಸಗೆಯ ಉರುಬಿನಿಂದ ವಾಯುಮಾನದಲ್ಲಿ ವ್ಯತ್ಯಾಸವು ಉಂಟಾಗಿ ಮುಂಗಾರ ಮುಂಗುರುಹಾದ ಬಿರುಗಾಳಿಯು ಬಿರ್ರನೆ ಬೀಸುವುದು. ಅದರ ಅಬ್ಬರವು ಹಿರಿದು. (೩ ಬಿರುಗಾಳಿ)

ಬೇಸಗೆಯ ಆರ್ಭಟಿಯನ್ನು ಅಡಗಿಸಿ ಸಕಲ ಸೃಷ್ಟಿಯನ್ನು ವೃಷ್ಟಿಮಯವಾಗಿಸುವ ವರ್ಷಾಕಾಲದ ಸಾಮರ್ಥ್ಯವು ಎನಿತಾಗಿರಬೇಕು! ಮಳೆಗಾಲದ ಆ ಶಕ್ತಿಯ ರಭಸವನ್ನು ಮುಂಗಾರಿನಲ್ಲಿ ಕಾಣಬೇಕು. (೪ ಮುಂಗಾರ್)

ಕಿರಿದಾಗಿ ಹುಟ್ಟಿ ಹಿರಿದಾಗಿ ಹಬ್ಬುವುದು ಸೃಷ್ಟಿಯ ಒಂದು ಕ್ರಮ. ಮುಂಗಾರ ಮೊದಲಿಗೆ ಮೂಲೆಯಲ್ಲಿ ಮೂಡಿದ ಮೋಡವು ಮುಗಿಲನ್ನು ಮುಸುಕಿ ಮಳೆಗರೆಯತೊಡಗುವುದು. ಈ ರಚನೆ ಸೋಜಿಗವಾದುದು. (೫ ನವವೃಷ್ಟಿ)

ಮಳೆಯಿಂದ ಜಲಪೂರಿತವಾದ ಕಾಡುಮೇಡುಗಳಲ್ಲಿ ತೊರೆ ಹೊಳೆಗಳು ತುಂಬಿ ಸೂಸುವುವು. ಮಲೆನಾಡಿನ ಹಳ್ಳವು ಮೇಲ್ನೆಲದಿಂದ ಹರಿದು ಆಳವಾದ ಕೊಳ್ಳದಲ್ಲಿ ಧುಮ್ಮಿಕ್ಕುವುದು. ಆಗಿನ ಧ್ವನಿಯು ಹೃದಯಭೇದಿಯಾದುದು. (೬ ಕಾಳ್ಪುರಂ)

ಇರುಳಿನಲ್ಲಿ ಸೃಷ್ಟಿಯ ರೂಪವು ವಿರೂಪವಾಗುವುದು. ಕಾರ್ಗಾಲದ ಕೊನೆಯಲ್ಲಿ ಕತ್ತಲೆಗವಿದ ಕರಾಲ ರಾತ್ರಿಯು ಭಯವನ್ನು ಹುಟ್ಟಿಸುವುದು. ಈ ಭಯಾತ್ಮಕತೆಯಲ್ಲಿಯೂ ಕವಿಯು ಒಂದು ನವ್ಯ ಅನುಭವವನ್ನು ಪಡೆಯುವನು. (೭ ಕಾರಿರುಳ್)

ಚಿತ್ರಸೃಷ್ಟಿ

## ಶಾಂತ

ಮುಂಜಾವಿನ ಅಂದವು ಮನೋಹರವಾದುದು. ಈ ಸಮಯ ದಲ್ಲಿ ಸೃಷ್ಟಿದೇವಿಯು ಸೌಮ್ಯರೂಪಿಣಿಯಾಗಿರುವಳು. ನುಣ್ಣನೆ ಸುಳಿಸುಳಿದು ಅಲೆದಾಡುವ ಎಳೆಗಾಳಿ. ನಿಶೆಯ ಶಾಂತಿಸುಧಾ ಸೇವನೆಯಿಂದ ಚೈತನ್ಯಗೊಂಡು ಎತ್ತೆತ್ತಲೂ ಎಚ್ಚತ್ತು ಪ್ರಸನ್ನ ಚಿತ್ತವಾದ ಚರಾಚರ ಪ್ರಪಂಚ! ನವೋನವ ನಿರ್ಮಿತಿಯ ನಿರಂತರ ನಾಯಕನಾದ ನೇಸರಿನ ಮುಂಬೆಳಕು. (೮ ಮುಂಜಾವು)

ಮಳೆಯಿಂದ ಮರಬಳ್ಳಿಗಳಿಗೆ ಪೋಷಣೆ. ಇಂತಹ ಮಳೆಗಾಲ ದಲ್ಲಿ ಮಳೆಯಿಲ್ಲದ ಮುಂಜಾವಿನ ಚೆಲುವು ಚೆನ್ನಾದುದು.

(೯ ಮಳೆಯಿಲ್ಲದ ಮುಂಜಾವು)

ಲೋಕವನ್ನು ತಣಿಸಿ ಕುಣಿಸುವ ಮಧುರ ಪ್ರಭಾವವು ಚಂದ್ರ ನಲ್ಲಿ ಇದೆ. ಆತನ ಶಾಂತ ಸಂಜೀವನ ಶಕ್ತಿಯಿಂದ ಸೃಷ್ಟಿಯು ಆನಂದಪರವಶವಾಗುವುದು. (೧೦ ಚಂದಿರನ ತಂಬೆಳಗು)

ಸೃಷ್ಟಿಸುಂದರಿಯ ಸೊಬಗಿನ ಸೆಲೆ, ಭಾರತೀಯ ಸಂಸ್ಕೃತಿಯ ಅಮರ ಅಲೆಯಂತಿರುವ ಗಂಗಾನದಿಯ ಪುಣ್ಯ ದರ್ಶನವು ಯಾವ ಸಹೃದಯನ ಹೃದಯವನ್ನು ಉಲ್ಲಾಸಗೊಳಿಸದಿರದು?

(೧೧ ಗಂಗಾದರ್ಶನ)

## ಚಿತ್ರ

ವಿಶ್ವದ ಅಂತರಾಳದಲ್ಲಿ ವಿವಿಧ ವಿಚಿತ್ರಗಳು ಒಡಮೂಡಿ ಎಡೆಯಾಡುತಲಿರುವುವು. ಅವುಗಳನ್ನು ಅರಿತು ಆಲಿಸುವುದು ಆಹ್ಲಾದಕರವಾಗಿದೆ.

ದಿವಾಕರನ ದೇದೀಪ್ಯಮಾನ ದೀಪ್ತಿಯ ಇದಿರಿನಲ್ಲಿ ವಿಶ್ವದ ಇತರ ಶಕ್ತಿಗಳು ಸತ್ವಹೀನತೆಯಿಂದ ಕಣ್ಮರೆಯಾಗುವುವು. ಆದುವೆ ಆತನ ಪ್ರಭಾವವು ಅಡಗಲು, ಗಗನಮಂದಿರವು ಜ್ಯೋತಿರ್ವೃಂದ ದಿಂದ ರಾರಾಜಿಸುವುದು. ಇಂತಹ ಚಿತ್ರಮಯ ರಾಮಣೀಯಕದ ರಂಜಕನು ರಜನೀರಮಣ! (೧೨ ಚಂದ್ರ)

ಸುಧಾಕರನ ಸೊಬಗಿನ ಸೋನೆಯ ಸೀರ್ಪನಿಗಳು ಈ ತಾರೆಗೆಗಳು ! (೧೩ ತಾರೆಗಳು)

ಸ್ವರ್ಲೋಕದ ಆ ಸಿಂಗಾರಿಯನ್ನು ಸ್ವಾಗತಿಸಲೆಂದೋ ಇಂದಿನೀ ಸಂಜೆಯ ಆಗಸವು ಚಿತ್ರವಿಚಿತ್ರವಾದ ರಚನಾಕೌಶಲವನ್ನು ಪ್ರದರ್ಶಿಸಿದುದು ! ವಿಲಕ್ಷಣವಾದ ವಿಶ್ವವಿದು ಒಂದು ಚಿತ್ರಮಂದಿರ; ಚಿತ್ರಸೃಷ್ಟಿ. ಇದರ ಚಿತ್ರಮಮತೆ ವಿಚಿತ್ರವಾದುದು. (೧೪ ಚಿತ್ರಸೃಷ್ಟಿ)

ತರತರದ ಆಕೃತಿ–ರೂಪಗಳನ್ನು ಧರಿಸಿ ಮಳೆಗಾಲದ ಮುಗಿಲಲ್ಲಿ ಮಿತಿಯಿಲ್ಲದಂತೆ ಸುಳಿದಾಡುವ ಮೋಡಗಳ ಲೀಲೆಯು ಆಶ್ಚರ್ಯಕರವಾಗಿದೆ. (೧೫ ಕಾರ್ ಮೋಡಗಳು)

ಬೇಸಗೆ, ಮಳೆಗಾಲ, ಗಾಳಿ, ಮಿಂಚು, ಸಿಡಿಲು, ಗುಡುಗು. ಮೋಡ, ಮಳೆ. ಒಂದಲ್ಲ, ಎರಡಲ್ಲ, ಅಗಣಿತ ಉದ್ಯೋಗಗಳು; ಅನಂತ ಆಟೋಪಗಳು ! ಇವುಗಳನ್ನು ತೋರಿ ತೋರಿ ಆಟವಾಡುತ್ತಿರುವ ಈ ಮಾಟಗಾರ ವಿಶ್ವವು ಅಚೇತನವೆನ್ನಬಹುದೆ ?
(೧೬ ಜಡಮಲ್ಲ ವಿಶ್ವವಿದು)

ನಿಸರ್ಗದ ವರವನ್ನು ಪಡೆದ ಎಡೆಗಳಲ್ಲಿ ಧರ್ಮದ ಅಧಿಷ್ಠಾನಗಳನ್ನು ಸ್ಥಾಪಿಸುವುದು ಭಾರತೀಯ ಸಂಸ್ಕೃತಿಯ ಒಂದು ಹೆಚ್ಚಳ. ಧಾರ್ಮಿಕ ಘನತೆಯಿಂದ ಉತ್ತುಂಗವಾಗಿರುವ ಶ್ರೀಶೇಷಾಚಲದಲ್ಲಿ ಸೃಷ್ಟಿಶೋಭೆಗೆ ಕೊರತೆಯಿಲ್ಲ. ವರ್ಷಾಶಿಲ್ಪಿಯ ಈ ಶಿಲ್ಪಕೃತಿಯು ಕಲಾಮಯವಾಗಿದೆ. (೧೭ ಶೇಷಾಚಲದಲ್ಲಿ)

ಅಮೃತರಸದಂತೆ ಪಸರಿಸುವ ಬೆಳುದಿಂಗಳು. ಎಲ್ಲೆಲ್ಲಿಯೂ ಗಾಳಿಯೊಡನೆ ಮೆಲ್ಲನೆ ಸುಳಿಯುವ ಹೂಗಂಪು. ಯಾವುದೋ ಒಂದು ಅಸ್ಫುಟ ಸಂಗೀತಧ್ವನಿ. ಈ ಸಂಮೇಲನದ ಐಸಿರಿಗೆ ಸರಿಯಾವುದು ? (೧೮ ಬೆಳ್ದಿಂಗಳಲ್ಲಿ)

ಬೆಳ್ದಿಂಗಳಿಂದ ಬಗೆಗೊಂಡ ಸೃಷ್ಟಿಯ ಸೊಬಗಿಗೆ ಅದಿಲ್ಲದಿರಲು ಹಾನಿಯಿಲ್ಲ. ಚಂದಿರನ ಚೆಂದವಿಲ್ಲದಿರುವಾಗಲೂ ಇರುಳು ಕುಂದಿಲ್ಲದ ಚೆಲುವನ್ನು ಬೀರುವುದು. ನಕ್ಷತ್ರಲೋಕದ ಈ ಸೊಗಸು ಸರಸವಾದುದು. (೧೯ ಕಳ್ತಲೆಯೊಳ್ಪು)

ಚಿತ್ರಸೃಷ್ಟಿ

ಕಡಲ ಅಲೆಗಳಲ್ಲಿ, ತೆರೆಗಳ ಹುಯ್ಲಿನಲ್ಲಿ ಪ್ರಕೃತಿಯ ರುಚಿರ ಕ್ರೀಡೆಯನ್ನು ಅವಲೋಕಿಸಬಹುದು. ( ೨೦ ತೆರೆ )

ಬನಸಿರಿಯ ಬಗೆಯೇ ಬೇರೆ. ರಸನಿರ್ಭರವಾದ ಸಸ್ಯಸೃಷ್ಟಿಯ ಹಚ್ಚಹಸುರಿನ ಹರಿತ ವಿಸ್ತರಣವು ಹಿಮಕಣಗಳ ಚಿತ್ತಾರದಿಂದಲೂ ಹೂಬಳ್ಳಿಯ ಶೃಂಗಾರದಿಂದಲೂ ಕುಸುರಿ, ಇನಿದಾಗಿ ಹಾಡುವ ಹಕ್ಕಿಗಳ ಮೇಳದಿಂದ ಜೀವಕಳೆತುಂಬಿ ರಮ್ಯತೆಯ ರಂಗನಿಲಯ ವಾಗಿರುವುದು. (೨೧ ಪಸಲೆ)

ಸೃಷ್ಟಿಯು ತೊಡುವ ರೂಪಗಳು ಸ್ವಪ್ನಸೃಷ್ಟಿಯಂತೆ ಆಕಲ್ಪಿತ ವಾಗಿರುವುವು. ಸ್ವಪ್ನಸಮವಾದ ಸೃಷ್ಟಿಯ ಒಂದು ರೂಪವನ್ನು ಕವಿಯು ಒಂದು ದಿನ ಕನಸಿನಲ್ಲಿ ಕಂಡನು. ಸ್ವಪ್ನಮಯವಾದ ಈ ಸಂನಿವೇಶವು ವೈಚಿತ್ರ್ಯವಿಲಸಿತವಾಗಿದೆ. (೨೨ ಸ್ವಪ್ನಸೃಷ್ಟಿ)

ಸುಂದರ

ವೈಚಿತ್ರ್ಯವೆಂಬುದು ಸಾಮಾನ್ಯವಾಗಿ ಸಮರಚನೆಯಿಂದ ಕೂಡಿರ ಲಾರದು. ಇಂತಹ ವೈಚಿತ್ರ್ಯದಲ್ಲಿಯೂ ಪ್ರಕೃತಿಯ ಒಂದು ಚೆಲು ವಿನ ಸುಳಿಯಿದೆ. ವೈಚಿತ್ರ್ಯಮಯವಾದ ಸೃಷ್ಟಿರಚನೆಯಲ್ಲಿ ಹಲವೆಡೆ ಸಮರಚನೆ, ಸಮರೂಪತೆ, ಸಮರಸತೆಯನ್ನು ಕಾಣುವುದು ಆದರ ಇನ್ನೊಂದು ವೈಚಿತ್ರ್ಯ. ಇದುವೆ ಸೌಂದರ್ಯವೆನಿಸುವುದು. ಸೃಷ್ಟಿಯ ಈ ಸೌಂದರ್ಯಸಾರವು ಮಧುರತರವಾದುದು, ನಿತ್ಯನೂತನ ವಾದುದು, ಅಮರವಾದುದು.

ಸಾಮಾನ್ಯವಾದ ಈ ಹುಲ್ಲುಹೊಲವನ್ನೇ ನೋಡಿರಿ. ಎನಿತು ಅಂದವಾಗಿ ತೊನೆದು ತೂಗಾಡುತಲಿದೆ! (೨೩ ಪುಲ್ಗಡಲು)

ಆಕೊ! ಅತ್ತ ಬಾನಿನಲ್ಲಿ ಮಿನುಗುವ ಸಿತರಶ್ಮಿ, ಸುಧಾನಿಧಿ, ಸೌಂದರ್ಯಸಾರೋದಧಿ ಚಂದ್ರಮ! (೨೪ ಚಂದ್ರ)

ಈ ಮಿತವಾದ ಗಾಳಿಯ ಹಿತವಾದ ಸೋಂಕಿನಲ್ಲಿ ಸೌಜನ್ಯವಿದೆ, ಸೌಹಾರ್ದವಿದೆ, ಸೌಮನಸ್ಯದ ಸೌರಭವಿದೆ. (೨೫ ಮೆಲ್ಗಾಳಿ)

ಮುಗಿಲಲ್ಲಿ ಸುಳಿದು, ನೆಲದಲ್ಲಿ ಹೊಳೆದು, ಗಾಳಿಯಲ್ಲಿ ಬೆಳೆದು,

ಎಲ್ಲೆಡೆಯಲ್ಲಿ ನಲಿದಾಡಿ ಸಕಲೇಂದ್ರಿಯಗಳಿಗೆ ಸೊಗವೀವ ಮೃದು-ಮಧುರವಾದ ಪ್ರಕೃತಿಯ ಈ ಸೌಂದರ್ಯರಸಾಯನವು ಶಾಂತಿಯ ಸಂಜೀವಿನಿ ಆಗಿದೆ. (೨೬ ಮೃದು-ಸವಿ)

ಎಳಗಾಳಿ, ಮೆಲುಬೆಳಕು, ಸಂಗೀತ, ಶಾಂತಿ ಇವುಗಳಿಗೆ ಒಲಿದು ಬಂದ ನಲ್ಮೊಗದ ಚೆಲ್ವು ಬಗೆಗೊಳಿಸುತಿರಲು, ಇಂತಹ ಸುರುಚಿರ ಸೃಷ್ಟಿಸೌಂದರ್ಯವನ್ನು ಸವಿದು ನಲಿಯರಾರು ? ಕೆಲೆಯರಾರು ? (೨೭ ನಲಿಯರಾರು ?)

ಕನ್ನಡ ನಾಡು ಚೆಲುವಿನ ಕಣಿ. ಅದರಲ್ಲಿ ಕೊಡಗು ಮಿಗಿಲಾದ ಬೆಡಗಿನ ಬೀಡು. ಇಲ್ಲಿಯ ನೆಲ, ಮುಗಿಲು, ದಿಕ್ಕುಗಳು ರಮ್ಯವಾಗಿ ರಾರಾಜಿಸುತಿರುವುವು. ಸೌಂದರ್ಯಸಾಮ್ರಾಜ್ಞಿ ಎಡೆಯಾಡುವ ಎಡೆಯಿದು. ಭಾವನೆಗೆ ನಿಲುಕದ ಚೆಂದವಿದರದು. (೨೮ ಕೊಡಗು)

ಬಾಳಿನ ಬೇಗೆಯಿಂದ ಬೇಗುದಿಗೊಂಡವರನ್ನು ಬರಮಾಡಿಕೊಂಡು ಶಾಂತಿಪೀಯೂಷದಿಂದ ಸಚೇತನಗೊಳಿಸುವ ಮಾಯಿಕ ಸಾಮರ್ಥ್ಯವು ಪ್ರಕೃತಿಯ ಮಡಲಲ್ಲಿ ಇದೆ. ಇಂತಹ ಶಾಂತಿಯ, ಚೆಲುವಿನ, ನಲಿವಿನ ನೆಲೆಗಳು ಕನ್ನಡ ನಾಡಿನಲ್ಲಿ ಒಂದಲ್ಲ ಎರಡಲ್ಲ, ಹಲವಿವೆ. ಆದರೆ ತಮ್ಮ ನಾಡಿನ ಇಂತಹ ಸೃಷ್ಟಿವೈಭವದ, ನಿಸರ್ಗದೈಸಿರಿಯ ಅರಿವು ಎಷ್ಟು ಜನರಿಗೆ ಇದೆ? ಕನ್ನಡಿಗರ ಇಂದಿನ ರೀತಿಯು ಕನ್ನಡ ನಾಡಿನ ಈ ಘನತೆಗೆ ಸಲ್ಲುವಂತಹದು ಆಗಿದೆಯೆ? ಕನ್ನಡದ ಇಂದಿನ ದುರ್ದೆಸೆಯನ್ನು ನೋಡಿ ಎದೆ ಕೊರೆಯುವುದು! ಕನ್ನಡವು ಮತ್ತೆ ತನ್ನ ಹಿರಿಮೆಯನ್ನು ಗಳಿಸಿಕೊಳ್ಳಲಾರದೆ? ಗಳಿಸಿಕೊಳ್ಳುವುದು, ಖಂಡಿತ; ಎಂದು ಗರ್ಭಿತವಾಗಿ ನಿಸರ್ಗವು ಕವಿಗೆ ಆಶ್ವಾಸನಕೊಡುವುದು. (೨೯ ರಾಮನ ಗುಳಿ)

# ೧ ಬೇಸಗೆ (೧)

ಉರಿಯುರಿವ ಬೇಸಗೆಯ ನಡುವಗಲ ನೇಸರಿನ
ಬಿರುಬಿಸಿಲ ಬೇಸುರಿಗೆ ಜೀವಿಗಳ್ ತತ್ತರಿಸೆ,
ಮರಬಳ್ಳಿಪೊದೆಪುಲ್ಗಳಳವಳಿದು ಜೋಲ್ವೀಳೆ, ಗಾಳಿ ಬೆಚ್ಚನೆಯೆ
ಬೀಸೆ

ತಿರೆ ಕಾಯೆ, ತಂಪು ಪುಗೆ ಕೆರೆಬಾವಿ ತೊರೆಗಳಂ,
ಮರಿಗಳೀ ಜಳಕೆ ತಲ್ಲಣಿಸಿ ಕಣ್ಮುಚ್ಚೆ, ಚೆ-
ಚ್ಚರದಿಂದೆರೆಂಕೆಯಿಂ ಪಕ್ಕಿಗಳ್ ಗಾಳಿಗೂಡೆ, ಪೆರ್ಚಿಪ್ಪುದೀಬೇಸಗೆ ॥೧॥
ಬಿರುವರಿವ ಬೆಂಗಾಳಿಯಿಂದುರಿವ ಬೆಂಬಿಸಿಲಿ-
ನರಿವಳಿದು ಬಾಯ್ದರೆದು ಮರಿಯೊರಗೆ ತಾಯ್-ಪುದುಳಿ
ಭರದಿನರಸೇರಿಲಂ ಚುಂಚಿನಿಂ ಸೀಳ್ದು ರಸವೊಸರೆ ಪನಿಪನಿಯುನುಣಿಸೆ
ಅರಿವೊದಗಿ ಮೆಲ್ಸರದೆ ಚೀಚಿಯೆಂದುಲಿಯೆ ಸಿಸು
ಪುರುಳಿ ಕೇಳ್ದೊಲವಲರೆ ಕಡುವೊಸೆದು ಮಗುವನ-
ಕ್ಕರತೆಯಿಂ ಬಿಗಿದಪ್ಪಿ ಲಲ್ಲೆಗೈದಪುದಮಮ
ಕಕ್ಕುಲತೆಯಿಂಪದೆನಿತೋ! ॥೨॥

ಬಾಡಿದೀಬಳ್ಳಿಯೆಳನನೆಯವೋಲ್ ಬಗೆಮುಗುಳ್
ಬಾಡಿ ಸುರುಟಿರ್ಪುದೈ, ಕಂದಿ ಬಿಳ್ದಪುದಿದಂ
ನೋಡ! ಬಿಸಿಲುರಿಯಳಿಯೆ ಸಂಜೆವೆಣ್ ವೈದೋರಿ ಸುಯ್ಯೆಲರ
ತಣ್ಪಿನಿಂದೆ

ಕಾಡುನಾಡುಗಳ ಸಸ್ಯಾಳಿಯುಂ ತಣಿಪಿ ಕಾ-
ಪಾಡುವುದು, ನಲ್ಲ, ನಿನ್ನಾಣತಿಯಿನಲ್ತೆ? ದಯೆ-
ಮಾಡ! ಈ ಬಗೆನನೆಯನರಳಿಸೈ ನಲ್ಮೆದಣ್ಣೆಲರಿಂದೆ
ಕೂರ್ಮೆಯಿಂದೆ! ॥೩॥

ಎಪ್ರಿಲ್ ೧೯೨೬

ಚಿತ್ರಸೃಷ್ಟಿ

## ೨ ಬೇಸಗೆ (೨)

ದುರುಳರೆರ್ದೆವೊಲ್ ಮೆಲ್ಪಿಗಿಂಬನೀಯದೆ ತಮ್ಮ
ನೆರೆಯೊಳ್ಕೆತಂದರಂ ಕನಿಕರಂದೊರೆದು ಮೆ-
ಯ್ಯುರಿಯಿಂದೆ ಬಳಲಿಸುತುಮುರುಬುವೀ ಕಲ್ಗಳಂ ಸೋಂಕಿ
ಕಡುಕಾಯ್ಪಿನಿಂದೆ
ಅರಿವುಗೆಟ್ಟೆತೊ ಎನಲ್ ಬುಗುರಿವೊಲ್ ಗರಗರನೆ
ತಿರುಗುತುಂ ಸುಯ್ಗುಟ್ಟುತಲೆವ ಸುಂಟುರೆಗಾಳಿ
ತಿರೆಯಿಂದೆ ಬಾಂಬರಂ ನಿಡುಬಳೆದು ಸುಳಿವ ಬಲ್ಗರನಂತದೇಂ
ಮೆರೆವುದೋ ! ||೧||
ಬಳಲಿಸುವ ಬಿಸಿಲುರಿಗೆ ನಿಡುಸುಯ್ಯುತೆರಳೆಗಳ್
ನೆಳಲ ತಣ್ಪಂ ಬಯಸಿ ಗಿಡದಡಿಯೊಳ್ಕೆತಂದು
ಮೆಳಲೊಟ್ಟಲೊಳ್ ಗಾಳಿಗೊಡಲೊಡ್ಡುತರೆಗಣ್ಣ ನಿದ್ದೆಯಿಂದುರ್ಪುವಿಲ್ಲಿ
ಅಳವಳಿದರಂ ದಯದೆ ತಣಿಯಿಸುತೆ ಸಜ್ಜನ-
ರ್ಕಳ ತೆರದಿನಾವಗಂ ಪರಹಿತದೊಳಾಯುವಂ
ಕಳೆಯುತಾಪದ್ಬಂಧುವೆನಿಪ ಪೆರ್ಮರನಿದೇನಿಳೆಯೊಳಗೆ
ಕೃತಕೃತ್ಯಮೋ ! ||೨||
ಬಿಸಿಗದಿರನಾಗಸದೊಳಲ್ಲಿ ನೆಲಮಿಲ್ಲಿ, ! ಬಿಸಿ-
ವಿಸಿಲ ಜಳದುರ್ಬಟೆಯಿದೆನಿತೊ, ! ವಿಶ್ವಂಭರಾ !
ಬಸಿರೊಳಗದೆಂತೊ ನೀನಿಂಬನಿತ್ತಿರ್ಪುದೈ ಬಲ್ಗಿಚ್ಚಿನಾಗಾರಕೆ ?
ಪುಸಿಯಲ್ತು ನೀನೀಶ ನಿತ್ಯನಿರ್ದ್ವಂದ್ವನೆಂ-
ದುಸಿರ್ವುದೀ ನಿಗಮಂಗಳಖಿಲಾತ್ಮ ! ತಲೆವಾಗಿ
ಬೆಸಕೆಯ್ವೆನೆನ್ನೊಡೆಯ, ನಿನ್ನನಾಂ, ನಿರ್ದ್ವಂದ್ವವೃತ್ತಿಯಂ
ದಯೆಪಾಲಿಸಾ ! ||೩||

ಎಪ್ರಿಲ ೧೯೨೭

ಚಿತ್ರಸೃಷ್ಟಿ

# ೩ ಬಿರುಗಾಳಿ (ಮುಳಿಯಲ್ಲಿ)

ಬಿರುಗಾಳಿಯೇನಗುರ್ವಿಸಿದಪುದೊ ! ಕಿನಿಸಿ ಕಿಂ-
ಕಿರಿವೋಗಿ ಮೆಯ್ಯುರ್ಬಿ ಪರ್ವಸಮಯಕ್ಷುಬ್ಧ-
ಶರಧಿವೋಲ್ ಶ್ರವಣಭೈರವರವಪ್ರೋದ್ದಾಮಮಾಗಿ ದಿಕ್ಸಂಧಿ ಸಡಿಲೆ
ಇರುಳ ಕಳ್ತಲೆಯುಳವಿಗಳಿದ ಕಾಳಿಮದ ಭೀ-
ಕರತೆಯಂ ಪೆರ್ಚಿಸುತೆ ಬೇರ್ವೆರಸು ಕಿೞ್ತು ಪೆ-
ರ್ಮರಗಳಂ ನೆಲಕುರುಳಿಸುತ್ತುಮೇಂ ಗರ್ಜಿಸುತೆ ಬಿಚ್ಚತಂ
ಬೀಸಿದಪುದೋ ! ||೧||

ಎನಿತು ಪಿರಿದಾದೊಡಂ ಗಾಳಿಯದಕಿನಿತೆಂತು
ದನಿ ? ಮಹಾತಿಮಿರಾಂಬುನಿಧಿತರಂಗೋತ್ಥಮು-
ತ್ಸ್ವನಮಿದೆಲೆ ನೀರ್ ಘನಗ್ರಾವನಿಕರಾಹತಿಪ್ರೋದ್ಭಿನ್ನವೀಚಿವಾರಿ
ಎನಿತು ನೊರೆವಿಂಡುಗಳ್ ಪೊಚ್ಚಳಿಪುವೋ ! ಮಿನುಗು-
ತೆನಿತು ಸುತ್ತಲ್ ಬಾಳೆಮೀನ್ಗಳುಚ್ಚಳಿಸುವುವೊ !
ಮನದೊಳೇಂ ಸ್ವಾತಂತ್ರ್ಯದಭಿಲಾಷೆಯೊಗೆವತ್ತೊ ಈಗಳೀದೃಶ್ಯದಿಂದೆ! ||೨||

ಎಲೆ ಇವೇನದ್ಭುತವೊ ! ಈಗಳಿಂತೀಸೃಷ್ಟಿ
ಜಲ ಪವನ ತಿಮಿರ ಸಂರಾವಂಗಳುಗ್ಗಡಕೆ
ನೆಲೆಯಾಗಿ ತನ್ನೊಂದು ರೌದ್ರತೆಯಳುಂಬದಿಂ ಮೆರೆದೊಡಂ
ಭೀತಿಯಿಂದೆ
ಚಲಚಿತ್ತನಾನಾದೆನಿಲ್ಲ ! ವಿಷಮತೆಯೊಳಂ
ಲಲಿತತೆಯ ಮಾಧುರ್ಯಮಂ ಸವಿಯುತೆನ್ನ ಬಗೆ
ನಲವಾಂತು ತಲ್ಲೀನಮಾದಪುದು ! ಬಹುವಿಧಂ ಶಕ್ತಿಯೆಲೆ
ಈ ಸೃಷ್ಟಿಯಾ ! ||೩||

೧೯೩೦

ಚಿತ್ರಸೃಷ್ಟಿ

## ೪ ಮುಂಗಾರ್

ಕಡಕಡಲ್ ಕಡಲೆಂದು ಕರ್ವೊಗದ ಕಾರ್ಮುಗಿಲ್
ಗುಡುಗುಡಿಸುತಬ್ಬರದೆ ಮಿಂಚುಗೋಲ್ಗಳನೆಚ್ಚು
ಕಡುಮಸಗಿ ಕೋಡುಗಲ್ಗಳನೊಡೆದು ನೇಸರಿನ ಬೆಂಬಿಸಿಲನೇ ನುಂಗುತೆ
ಅಡಗಿಸುತೆ ತನ್ನೊಡಲೊಳದರ ಬೆಳ್ವೆಳಕನೇ
ನಡುವಗಲೊಳೆಡೆಮಾಡುತುಂ ತಮಕ್ಕೆಲ್ಲಿಯುಂ
ಪೊಡವಿ ತೇಲ್ವನ್ನೆಗಂ ನೀರ್ಗಳಂ ಬಿಡುಬಿಡುತೆ ರೌದ್ರತೆಯಿನೇಂ
ಮೆರೆವುದೋ ! ॥೧॥

ಸುರಿದಪುವು ಬಿರುಸರದ ಬಲ್ಸರಿಗಳೆತ್ತಲುಂ,
ಬಿರುಗಾಳಿ ಭೋರ್ಗರೆಯುತವಿರತಂ ಬೀಸುವುವು,
ಪರಿದಪುವು ಪೊನಲಿಡುತೆ ನೀರ್ಗಳೆಲ್ಲೆಲ್ಲಿಯುಂ ರಭಸದಿಂ ಧರಣಿಯದಿರೆ!
ಬಿರಿಯವೇ ದಿಕ್ಸಂಧಿ ಸೊಪ್ಪುಳ್ಗೆ ? ವಿಶ್ವಮೀ–
ತೆರದೆ ಸಂರಂಭಮುಯಮಾದೊಡಂ ಚೆಲ್ವಿಗೇಂ
ಕೊರತೆಯೇ ? ವ್ಯತ್ಯಸ್ತಮಾಗಿರ್ದೊಡಂ ಸೃಷ್ಟಿ ನೆಲೆಯಾಯ್ತಲೇ
ನಿರತೆಗೆ ! ॥೨॥

ಜೂನ ೧೯೩೦

## ೫ ನವವೃಷ್ಟಿ

ಬಿಸಿಲುರಿಗೆ ತಿರೆ ಕಾಯೆ, ಗಾಳಿ ತಲ್ಲಣಿಸಿ ಕಾ-
ಲ್ಗುಸಿದು ನೊಂದೊಯ್ಯನೊಯ್ಯನೆ ತಣ್ಪನರಸುತುಂ
ಬಿಸುಸುಯ್ಯುತುಂ ಪರಿಯೆ, ಪಕ್ಷಿಗಳ್ ಮರಗಳೆಲೆವರೆಗಳೊಳ್
ಮೆಯ್ಗರೆದಿರೆ
ಪೊಸಮುಗಿಲ್ ಕಾಣಿಸಿದುದೆಂತೊ ಒರ್ಮೊದಲೆ ಆ-
ಗಸದಲ್ಲಿ ಜಳಧಿಯೊಳ್ ನೌಕೆವೊಲ್ ಕಾಣುತುಂ ?
ಕಿಸುಗಣ್ಚಿ ಬಿಸಿಲದೇಂ ಮೆಯ್ವೆರ್ಚಿ ಮುಗಿಲನುಗಿಬಗಿಮಾಡಲುರಿ
ವರಿದುದೋ ||೧||

ಕುಸಿದು ಕಾಲ್ದೆಗೆಯದಾಬಿಸಿಲ ಕಾಯ್ಪಿಂ ಮುಗಿಲ್ !
ಮುಸುಳದುಪಕಾರಿ ನವಜೀವನಂ ! ತನ್ನ ಸಾ-
ಹಸದ ಪೆರ್ಚಿಂ ಪಿರಿದುಗೆಯ್ದು ಜಗಕಚ್ಚರಿಯನೊದವಿಪುದೆ ಸಾಜಮುದಕೆ !
ವಸುಧೆಯಲ್ಲಿರಲೀಯದಾಗಸಕೆ ತನ್ನನೇ-
ರಿಸಿ ಭುವನದಖಿಳ ಜೀವಂಗಳಂ ಬಿಸುಪಿನಿಂ
ದೆಸೆಗೆಡಿಪ ಬಿಸಿಲ ಬಾಳ್ವಾಸೆಯನೆ ಪಿಂಗಿಸಲ್ ಮುಗಿಲದೇಂ
ಪಿರಿದಾದುದೋ ! ||೨||

ಇದೊ ಭೇರಿ ಗಂಭೀರನಿನದದಿಂ ತುಂಬುತಿ-
ರ್ಪುದು ನಿಖಿಳ ವಿಶ್ವಮಂ ಪ್ರಸ್ಫುರಚ್ಛವಿ ಘನಂ
ಮುದವೀಯುತುಂ ಕಣ್ಗೆ ವಿದ್ಯುತ್ಪ್ರಭಾಭಾಸುರಂ ಗಗನಮಂ ವ್ಯಾಪಿಸಿ !
ಪದೆಪಳಿದು ಸೋಲ್ಗೆ ತಾನೆಡೆಯಾದೆನೆಂದು ಬೇ-
ಗುದಿಯಿಂದೆ ಬಿಸಿಲದೇಂ ಮಾಸಿ ಮರೆಯಾಯ್ತೊ ! ಸಾ-
ಯುದರನಳಿಯಲ್ಬಗೆದು ದಾರುಣಮನೆಸಗಿ ಬೇವಸಕೆ
ಗುರಿಯಾಗರಾರೋ ? ||೩||

ಚಿತ್ರಸೃಷ್ಟಿ

ಬಂದುದೆತ್ತಣದೊ ತಣ್ಗಾಳಿಯಿದು ಬಿಸಿಲಿಂದೆ
ಬೆಂದವರ ಮೆಯ್ಯುರಿಯನಾರಿಸುತೆ ತನ್ನ ಸೋಂ-
ಕಿಂದದೇಂ ಮುಂದೊದವುವೊಳ್ಳಿತಂ ಸೂಚಿಸುತೆ ತೀಡುವುದೊ
ಸೊಬಗುದಳೆದು !

ಬಾಂದಳದೊಳಂಬುವಾಹಂ ತುಳುಂಕುವ ವಾರಿ-
ಯಿಂದಂ ಕದಕ್ಕದಿಸಿ ಕಣ್ಗೋಳಿಸುತಿರೆ ರಭಸ-
ದಿಂದೆ ಸುಯ್ಯೆಂದು ಬಲ್ಸರಿಯದೇಂ ಸುರಿಯುತೆಲ್ಲೆಲ್ಲಿಯುಂ
ಕಾಲ್ವರಿದುದೋ ! ||೪||

ಸುರಿವ ಬಲ್ಸರಿಗಳಿಂ ಮಿಳ್ಳಿಸುವ ಮಿಂಚುಗಳಿ-
ನರಿಚುವ ಮುಗಿಲ್ಗಳಿಂ ಕಾಲ್ವರಿವ ನೀರ್ಗಳಿಂ
ಬಿರುವರಿವ ಗಾಳಿಗಳಿನೇಂ ಪೆಂಪೊ ! ಸೃಷ್ಟಿಯೇಂ ಪ್ರಾಗಲ್ಭ್ಯ
ಮಾಂತೆಸೆವುದೋ !

ವಿರಜಮೀತರುರಾಜಿ ನಾಲ್ಕುನೀರ್ಮಿಂದ ನವ-
ತರುಣಿಯಂಗದ ವಿಳಾಸಂಬಡೆದು ಕಣ್ಮನಕೆ
ಕರೆವುದುತ್ಸವಮನೀ ನವವೃಷ್ಟಿಯಿಂದದೇಂ ಪೊಸದೇಸಿ
ಪಸರಿಸಿದುದೋ ! ||೫||

ಎಪ್ರಿಲ ೧೯೩೨

ಚಿತ್ರಸೃಷ್ಟಿ

## ೬ ಕಾಳ್ಪುರಂ

ಕಳಕಳನಿನಾದದಿಂ ಕುಣಿಯುತಾನಂದದಿಂ
ನಳಿಯುತೊಯ್ಯಾರದಿಂ ಬಳ್ಕುತುಂ ರಯ್ಯದಿಂ
ಸುಳಿಯುತುನ್ಮಾದವಶವಾಗಿ ಪರಿದೋಡುತುಂ ಕಣ್ದಪ್ಪಿ ಕಲ್ಲೆಡವುತೆ
ಚಳಿದು ಮುಂಬರಿಯುತ್ತುಮರೆಗಳಂ ಪಾಯ್ದೊಡೆದು,
ಪಳಿಯುತುಂ ದೈವಮುಂ, ಬೆಪ್ಪಾಗಿ ಬರುಬರುತು–
ಮಳವಳಿಯೆ ಕಾಳ್ಪುರಂ ಪರಿದಿರ್ಪೋ ಭೋರೆಂದು ಬಿಳ್ದಪುದು
ದರುವಿನಲ್ಲಿ ! ||೧||

ಎನಿತೊಂದು ಸೊಪ್ಪುಳ್ಕೆ ! ಅಳದಪ್ಪಿ ದೆಸೆಗೆಟ್ಟು
ಪೊನಲಿದೀಗಳಿದೆಸೆಗೆ ಪಕ್ಕಾಗಿ ಬಿಳ್ದುದಕ-
ಟೆನುತೆ ನಿರ್ಜರರಿರದೆ ಗೈವ ಹಾಹಾರವವೊ? ಕಿನ್ನೈಲದ ದುಗುಡವೊರಲೋ?
ನಿನಗಿದೆನ್ನದು ಬವಣಿಯೊದವಿದತ್ತಕ್ಕಟಾ-
ಎನುತೆ ಮಂದೈಸಿದಳಲಿಂದೆ ಗಿರಿಯಳ್ವುದೋ ?
ಎನಗಿದೇನಾಯ್ತೆಂದು ಬಸವಳಿದು ಬೀಳ್ವ ನಿರ್ಝರಿಣಿ
ಗೋಳಿಡುವುದೇನೋ ? ||೨||

ಭಳಿರೆ ಏನದ್ಭುತವೊ ! ದರುವಿನೊಳಗಾವಗಂ
ತಳತಳಿಪ ಬೆಳತಿಗೆಯ ತುಂತುರೊಬ್ಬುಳಿಗಳೊಳ್
ಪೊಳೆದೆಸೆವ ಸುಪ್ರಭಾಶಬಳೇಂದ್ರ ಚಾಪಂಗಳೆಲ್ಲೆಡೆಯೊಳೆಡೆಯಾಡುವಾ
ಜಳದೇವಿಯಕ್ಕರತೆಯಿಂದುಟ್ಟ ಚಿತ್ರಮಣಿ-
ವಿಳಸತ್ಸುವಸನಸಂವ್ಯಾನಮೆಂಬಂತೆ ಕಂ–
ಗೊಳಿಸುತಿರೆ, ತೆತ್ತಿಸಿದ ಪಳುಕುವಣಿಯೋಳಿಯೆನೆ ನೀರ್ಗುಳ್ಳಿ–
ಸಾಲೆಸೆದುದು ||೩||

ಚಿತ್ರಸೃಷ್ಟಿ

ತೆರೆವೊಯ್ಲಿನಿಂ ನೊಂದ ಪೆರ್ಗಲ್ಗಳಳುವೊ, ಕಂ-
ದರದ ಕರ್ಮಡುಗಳೊಳ್ ಗೆಲ್ದಂದು ಸಗ್ಗಿಗರ್
ಸೆರೆಯಿಟ್ಟ ಬಲ್ಗರರ ಮೊರೆಯೊ ಎನೆ ನೀರತ್ತಣಿಂ ನಾದವೈತರ್ಪುದು
ವರುಣದೇವರ ನೆಗಳಿನಗ್ಗಳದ ಮೈವೊಳೆಪೊ
ಶರದಭ್ರಮೊಲ್ದುಣ್ಬ ನಲ್ಲಣಿಸೊ ಭೋಗವತಿ-
ಯುರಗತತಿ ತೊರೆವ ಬೆಳ್ವರೆಪಂತಿಯೋ ಎನಲ್ ನೊರೆವಿಂಡು
ಚೆಲ್ವೆಸೆದುದು ॥೪॥

ಜಳಪಾತದಾಘಾತದಿಂದೆತ್ತಲುಂ ದರುವಿ-
ನೊಳಗೆನಿತು ಸಂರಂಭಮೊಗೆದಪುದೊ ! ವಾರಿಸಂ-
ಕುಳಮದೇಂ ಸೊಪ್ಪುಳ್ಗೆ ಬಳ್ಕುವುದೊ ! ಸುಳಿಗಳಂ ಕಂಡಳ್ಕಿ
ಬಿರುವರಿವುದೊ !
ಸೆಳವಿಂಗೆ ಸಿಲ್ಕಿ ಬೆಳ್ಪಳಿಸಿ ಬೆಂಡಾಗಿ ಕೆ-
ಕ್ಕಳಿಸಿ ನೊರೆಯುಗುಳುತುಂ ನರಳುತುಂ ಮುಂಬರಿದು
ಸುಳಿಗಳೊಳ್ ಬಿಳ್ದು ಬೆಬ್ಬರಿಸುತೇಂ ಚೀರುವುದೊ ! ಸುತ್ತುತೇಂ
ನಿಡುಸುಯ್ವುದೋ ! ॥೫॥

ಒಂದೆರಳ್ಮೂರು ನಾಲ್ಕೈದಾರು ಸಾಲ್ಗುಮೆಲೆ
ಎಂದಿಗುಂ ಮುಗಿಯದೀ ಸೃಷ್ಟಿಯೈಸಿರಿಯೆಣಿಕೆ !
ತಂದೆ ! ನಿನ್ನಯ ಲೀಲೆಯಂದಮೆಲ್ಲೆಲ್ಲಿಯುಂ ಬೀಡು-
ಗೊಂಡಿರ್ಪುದಮಮ!
ಕುಂದದೀ ಸಿಂಗರದ ಕಡಲನೆಂತೆಂತುಸುರ-
ವೃಂದನುತ, ನೋೞ್ಪೆನಾನಿದರ ವಿಸ್ತಾರಮಿನಿ-
ತೆಂದರಿಯಲಾರದೆಯೆ ಬೆಗಡುಗೊಳ್ವುದು ಮನಂ ! ಬೆಡಗಿಗಿದ-
ಕಂತಮಿಲ್ತು ! ॥೬॥

**ಮಾರ್ಚ ೧೯೨೬**

**ಚಿತ್ರಸೃಷ್ಟಿ**

## ೭ ಹಿಂಗಾರ್

ದೆಸೆಬಿದ್ದಮಂಧಂತಮಸುಂ ಸಾಂದ್ರಮೆಲ್ಲಿಯುಂ
ಪಸರಿಸಿರ್ಪುದು, ಗಾಳಿಯೆಡೆವಿಡದೆ ಕೂಗುತ್ತು–
ಮೆಸಗುವುದು, ಜೀರುಂಡೆಗಳ್ ಬಿಡದೆ ತಾವೆತಾವಾಗಿ ತಮ್ಮಿಚ್ಚೆಯಿಂದೆ
ಪಸಲೆಯೊಳ್ ಮರಗಳೊಳ್ ಚೀರ್ದು ತಮ್ಮಿರವನರಿ–
ಯಿಸುತುಮಿರ್ದಪುವು, ಬಾನಂ ಮುಗಿಲ್ ಮೆಯ್ವೆರ್ಚಿ
ಮುಸುಕಿರ್ಪುದೆತ್ತಲುಂ ! ರೂಪು ಹೃದಯಗ್ರಾಹಿ ಕಾರ್ಗಾಲದೀ–
ಯಿರುಳಿನಾ ! ॥೧॥

ಚಿತ್ರಸೃಷ್ಟಿ

ಅಂದಿನಾಮೊಳಗಿನಬ್ಬರಮಿನಿತುಮಿಲ್ಲಲೇ
ಇಂದು ನೀರವವಾಗಿ ನೀರದಂ ಸಾಧುಜನ-
ರಂದದಿಂದಿರ್ದಪುದು ಕೇವಲಂ ಕೃತಿರತಂ ಸಕಲ ಲೋಕೋಪಕಾರಿ
ಅಂದು ನೂತನಮಿರ್ದುದಂಬುದಂ, ನವ್ಯತೆಗೆ
ಸೌಂದರ್ಯಮುಚ್ಛೃಂಖಲತೆಯಿನಾಯ್ತಂದಿನಂ-
ತಿಂದಿರ್ದೊಡಪ್ಪುದಲ್ತೇ ಕುಂದು ? ಭೂಷಣಂ ಪ್ರೌಢರ್ಗೆ
ಗಾಂಭೀರ್ಯವೈ ||೨||

ಇದು ಚಂದ್ರಲೋಕದಿಂ ಬಂದುದೇನೋ ಗಾಳಿ ?
ಇದರ ದನಿಯಿಂಪೆನಿತೊ? ಸಂತತಂ ಬೀಸುತುಂ
ಸೊದೆಯನೇ ಕರೆದಪುದು ! ಸಂಸೃತಿಯ ಪಾಶದಿಂ ಬಿಗಿವಡೆದ
ಮನಮೆನ್ನದು
ಇದೊ ಬಂಧನಂಗಳಂ ಪರಿದನಾಯಾಸದಿಂ
ಮದಮತ್ತ ಕರಿಯವೋಲ್ ಸ್ವಚ್ಛಂದ ವೃತ್ತಿಯಿಂ
ಮುದದ ಸಾಗರದೊಳೋಲಾಡಿ ನಲಿದಪುದಮಮ
ಏಂ ಪ್ರಭಾವವೊ ಇಂಪಿನಾ ! ||೩||

ಧರಣಿಯಂ ಕೊಂಡುಯ್ಯಲುಜ್ಜುಗಿಸಿದುದೊ, ತಿಮಿರ-
ಶರಧಿಯಂ ಬರಿಕೆಯ್ಯಲೇಂ ಗಾಳಿಯೆಳಸಿದುದೊ,
ನಿರತಿಶಯವೇಗದಿಂ ಕ್ಷುಬ್ಧಾಬ್ಧಿಗಂಭೀರನಿಸ್ವನಂ ಬೀಸಿದಪುದು !
ಸರಸತಿಯ ದಿವ್ಯ ಸನ್ನಿಧಿಯೆಂತೊ ? ಬೀಣೆಯಿಂ-
ಚರದಿಂಪಿನೈಸಿರಿಯದೆಂತೊ ? ಮಚ್ಚಿತ್ತಮಂ
ಸರಭಸಂ ಸೆರೆಗೊಳ್ವುದೀಸ್ವನಂ ! ಬೀಸು, ಬೀಸೆಲೆ, ಗಾಳಿ ! ಬೀಸು !
ಬೀಸು ! ||೪||

ಆಗಸ್ಟ ೧೯೩೦

ಚಿತ್ರಸೃಷ್ಟಿ

## ೮ ಮುಂಜಾವು

ಬೆಳಗುಜಾವದೊಳೆಳ್ದು, ಪಕ್ಕಿಗಳನೆಳ್ಚರಿಸಿ,
ಕಳಿಕೆಗಳನರಳಿಸುತೆ, ಮೆಲ್ಲೆಲರ್ ತಂಗೊಳದ
ತಿಳಿನೀರೊಳರಸಂಚೆವಿಂಡಿನೊಡನುಲ್ಲಸದಿನೋಲಾಡಿ, ನೆಯ್ದಿಲ್ಗಳಾ

ಬಳಗಮಂ ಮೆಯ್ದಡವಿ ಮೆಲ್ಸರದಿನಿನಿವಾತು-
ಗಳನಾಡಿಯವರೊಡನೆ, ತಡಿವಿಡಿದು ಸಾಲ್ಗೊಂಡು
ಬೆಳೆದ ಪಣ್ಮರಗಳೊಳ್ ನೇಲ್ವ ಕಳಿವಣ್ಗಳಂ ಮುಂಡಾಡಿ
ನಲಿನಲಿದುದು ||೧||

ಚಿತ್ರಸೃಷ್ಟಿ

ಎಳಗಾಳಿಯಾಟದಾಸೌಂದರ್ಯಮಂ ಮನಂ–
ಗೊಳೆ ನೋಡಿ ವನದೇವಿಯಳ್ತಿಯಿಂ ನಸುನಗಲ್
ಪೊಳೆವವಳ ಸುಲಿವಲ್ಗಳಿನಿವೆಳಗಿದೆನೆ ಬಿರಿದ ಮಲ್ಲಿಗೆಗಳೆರ್ದೆಗೊಳಿಪುವು,
ಕಳಕಳನೆ ಜಳದೇವಿ ನಗುವಳೆಂಬಂತೆ ಮಂ–
ಜುಳವಾಗೆ ತೆರೆಗಳಾಮೆಲ್ಸರಂ, ಭೂದೇವಿ
ಭಳಿಭಳಿರೆನುತ್ತೆ ಚಪ್ಪರಿಪಳೆನೆ ಕೆಂದಳಿರ ಸಾಲೊಲೆಯುತೆಸೆದಿರ್ದುದು ||೨||

ಇನನನ್ನೆಗಂ ಕಳ್ತಲೆಯನಡಸುತುಂ ಪಿರಿದು
ಮುನಿದದಂ ಕಾಲ್ಕೆಳಗೆ ತೊತ್ತಳಿಂದುಳಿದು ನು–
ಣ್ಣನೆ ನುರ್ಗುನುರ್ಗಾಗಿಪುದುಮದರ ಕೆನ್ನೀರ ಸೋಂಕಿನಿಂ ಕೆಂಪುವಡೆದು
ಘನತೆವೆತ್ತಾಗಸದೊಳೆಳ್ತಂದನಾತನಾ–
ಯಿನಿದಾದ ಕೆಂಬೆಳಗು ಮೈಗಣೆಯೆಲಚ್ಚರಿಯಿ–
ನೆನಗೆ ಪೊನ್ನೊಡಲಿದೆಂತೆಂದು ಬೆಳ್ವಕ್ಕಿ ಪಡಿನೆಳಲನೀಕ್ಷಿಸುತಿರ್ದುದು ||೩||

ಇದೊ ನೋಡಿದೊಂದೆಯೊಳೆನಿತೊಂದು ಸೊಬಗು ಗಡ !
ಮೃದುಪವನನಿನಿಸೋಂಕು, ತನಿಗಂಪು, ನಲ್ವಾಡು,
ಮುದವಾಂತ ಪಕ್ಕಿಗಳ ನುಣ್ಚರಂ, ಬಿರಿಮುಗುಳ ಬಲ್ ಬೆಡಗು,
ಮೆಲ್ದೆರೆಗಳಾ ||
ಮೃದುಗೀತೆ, ತಿಳಿನೀರ ನಿರತೆ, ನೇಸರಿನ ಚೆಂ–
ಗದಿರ ಪೊಳೆಪಿನ ಚೆಲ್ವು ! ಸೊಂಪಿದೇಂ ! ಸೊಗಸಿದೇಂ !
ಬಿದಿ, ನಿನ್ನ ಜಾಣೆನಿತೊ ? ನಿನ್ನ ಸೌಭಾಗ್ಯದಾಕರದ
ವಿಸ್ತಾರಮೆನಿತೊ ? ||೪||

೧೯೨೬

## ೯ ಮಳೆಯಿಲ್ಲದ ಮುಂಜಾವು

ನೆಲದ ಕೆಸರಾರಿದುದು, ಕಾಲನಡರದು ದೂಳಿ,
ಒಲವನಲರಿಪುದೆಲರ್, ಗಿಡುಬಳ್ಳಿಗಳ್ ಮಿಂದ
ಲಲನೆಯಂಗದ ಸೊಬಗನಾಂತು ಕಂಗೊಳಿಸುವುವು !
ಸೌಂದರ್ಯವೆನಿತೊಂದಿದು !

ಲಲಿತವಾದೆಳವಿಸಿಲ ಬೆಳ್ಪಿನೊಳ್ ಹೂಗಳಿವು
ನಲಿನಲಿದು ನರುಗಂಪನುಗುತುಗುತುಮೊನಪಿನಿಂ—
ದೊಲೆದಪುವು ಕುಣಿದಪುವು ಬಾಗುವುವು ಬಳ್ಕುವುವು !
ನೋಡಲೆನಿತೊಂದು ಸೊಂಪೊ! ॥೧॥

ಆಕ್ಟೋಬರ ೧೯೨೭

ಚಿತ್ರಸೃಷ್ಟಿ

# ೧೦ ಚಂದಿರನ ತಂಬೆಳಗು

ಚಂದಿರನ ತಂಬೆಳಗು ಪಸರಿಸಿರೆ ಕಲ್ಗಳುಂ
ಮಂದಹಾಸಂಗೊಳುತುಮಿರ್ಪಂತೆ ತೋರ್ದಪುವು !
ಚೆಂದವೆನಿತೊದವಿದುದೊ ಇಳೆಗಂತರಿಕ್ಷಕಾಗಸಕೆಲ್ಲದಿಕ್ಕುಗಳ್ಗೆ !

ಒಂದಿ ಸೌಂದರ್ಯದೊಳ್ ಸೊಗಯಿಪುದು ಶಾಂತಿ ! ಎನಿ-
ತೊಂದು ಮಧುರವೊ ಪೆರೆಯ ತೀರ ದನಿ ! ಅಡಿಗಡಿಗೆ
ನಿಂದು ಸವಿಯುತಮಿರ್ಪುದದನಲಾ ತೆಂಗಾಳಿ ! ಮೋಹಿಸರ-
ದಾರಿಂಪಿಗೆ ! ||೧||

ಮನದೊಳೊದವಿದುದು ಮೃದುಮಧುರಭಾವನೆಯೆನ್ನ
ಮನಮೆ ಈ ಬಾಹ್ಯಸೃಷ್ಟಿಯ ರೂಪೊ ? ಸೃಷ್ಟಿಯೇ
ಮನದ ರೂಪೋ ? ಮನದೊಳಿರ್ಪುದಂ ಸೃಷ್ಟಿಯೊಳ್‌ಕಂಡೆಪೆಂ !
ಚಿತ್ರವೆನಿತೊ !

ಮನಮಳಿದುದೋ ಸೃಷ್ಟಿಯಳಿದುದೋ ಮೇಣ್ ತಿಳಿಯೆ-
ನೆನಗೀಗಳೆತ್ತಲುಂ ತೋರ್ಪುದೊಂದೇ ಒಂದು !
ಮನಮಿಲ್ಲ ಸೃಷ್ಟಿಯಿಲ್ಲಾನಂದಮಾನಂದಮಾನಂದಮೊಂದೆ ಒಂದು ! ||೨||

ಅರಸು ನೀನೇ ದೇವ ! ಸತ್ಯಮಿದು ! ಮಿಕ್ಕವ-
ರ್ಗರಸೆಂಬುದುಪಚಾರವಚನವೈ ! ನಿನ್ನ ಕಣ್
ಪರಿವುದೆಲ್ಲೆಡೆಯಲ್ಲಿ ! ಸಂದಿಗೊಂದಿಗಳಲ್ಲಿ ಪರಿವುದೈ ! ನಿನ್ನ ಕಣ್ಗೆ

ಪೊರಗಾಗದಿರ್ಪನಾಂ ಪದಿನಾಲ್ಕು ಲೋಕಂಗ-
ಳೆರೆಯ, ನೀನಿನಿತತುಳಭಾಗ್ಯಭಂಡಾರಮಂ
ತೆರೆದಿರಿಸಿದ್ದೈ ಮುಂದೆ ! ಏನಿದಚ್ಚರಿ ತಂದೆ! ನಿನ್ನೊಲ್ಮೆಯೆನ್ನೊಳೆನಿತೊ! ||೩||

೧೯೨೮

ಚಿತ್ರಸೃಷ್ಟಿ



ಪಟ ೪೮

ಚಂದಿರನ ತಂಬೆಳಗು

# ೧೧ ಗಂಗಾದರ್ಶನ

ಪರಿವಳತಿಗಂಭೀರಗತಿಯಿಂದೆ ಗಂಗೆ ಹಿಮ–
ಗಿರಿಯಡಿಗಳೊಳ್ ಸುಧಾಧವಲಜಲೆ ಹರಿಪಾದ-
ಸರಸಿಜೋದ್ಭವೆ ಧರೆಯ ಸಕಲಸೌಭಾಗ್ಯನಿಧಿಯುನ್ನತತರಂಗಾವಲಿ
ನಿರುಪಮಂ ಸೌಂದರ್ಯಮಿರ್ಕಡೆಯ ತಡಿಗಳೊಳ್
ತೆರತೆರದ ಪೂವಳ್ಳಿಗಳ ತಳ್ಕೆಯಿಂದೆಸೆವ
ಮರಗಳಿಂ ಚೆಲ್ವೆತ್ತ ದೇವತಾತ್ಮನ ನೆಳಲ್ ನೀರೊಳೇಂ
ಸೊಂಪೆಸೆವುದೋ ! ||೧||

ಆಡುವಳ್ ನಲಿನಲಿದು ಕುಣಿವಳಾನಂದದಿಂ–
ದೋಡುವಳ್ ವೇಗದಿಂ ತೇಲಿಸುತೆ ನೊರೆಗಳಂ,
ದೂಡುತುಂ ಕಲ್ಗಳಂ, ಛಂದದಿಂದೆತ್ತಲುಂ ತುಂತುರ್ಗಳಂ ಸೂಸುತೆ,
ನೋಡುತುಂ ನಿಲ್ವಳಚ್ಚರಿಯಿಂದೆ ಗಿರಿವರನ
ಗಾಡಿಯಂ, ಮನವೊಲ್ದು ಮಂಜುಲಧ್ವನಿಯಿಂದೆ
ಪಾಡುವಳ್ ಮಾರ್ದನಿಗಳಿಂ ತುಂಬೆ ಬೆಟ್ಟದಡಿಗಳ್ ಸುತ್ತಲೆನಿತು
ಚೆಲ್ವೋ ! ||೨||

ಇವಳ ಸೊಗಯಿಪ ಸೋಂಕಿನಿಂ ಸೊಗಂದಾಳ್ದುಮಾ–
ಧವನೊಲ್ದು ಮಂದಹಾಸಂಗೆಯ್ಯೆ ಸಲಿಲಮಿದು
ಧವಲವಾದತ್ತೇನೊ ಆಸ್ಮಿತದ ಛಾಯೆಯಿಂದದರಿಂದೆ
ಮಾಧುರ್ಯವೋ ?
ಭುವನತ್ರಯಂ ನಿನ್ನ ನಲ್ಮೆಗೆಳಸುವುದಂಬೆ
ದಿವಿಜನದಿ ! ನಿನ್ನ ಪೆಂಪಿನಿತೊ ! ನೀಂ ಮುರಿದು ಮು–
ಕ್ಕುವೆ ದುರಿತ ದುರ್ವಾರದಾವಾಗ್ನಿಯಂ ! ನಮೋ, ವಿಶ್ವನುತೆ
ಭಾಗೀರಥೀ! ||೩||

ದಿಸೆಂಬರ ೧೯೩೧

ಚಿತ್ರಸೃಷ್ಟಿ

## ೧೨ ಚಂದ್ರ

ಇನನಿನ್ನೆವರಮುರಿದು ಪೋದನಿದು ತಕ್ಕ ಪೊ-
ಳ್ತಿನಗವನಿಯಂ ನುಂಗಿ ಪಸಿವನುಡುಗಿಸಿ ತಣಿಯ-
ಲೆನುತಸಿತವಸ್ತ್ರಮಂ ಪೊದೆದು ಕಳ್ತಲೆಯೆಂಬ ಬಲ್ಗರಂ ಬರೆ ಮೆಲ್ಲನೆ,
ಮನವಿಳಿದು ತಿರೆ ಸುಗಿದು ಕಂಗೆಡುತ್ತಿರೆ, ಕಾಯ-
ಲನುನಯದಿನುಡುಸೈನ್ಯದಿಂದೊಂದಿ ಬಂದು ವು-
ಮ್ಮೊನೆಯೊಳಾರಾತಿಯಂ ತತ್ತರಂದರಿದು ಬಿದು ಸಡಗರದಿನೇಂ
ಮೆರೆವನೋ ||೧||

ಇಂಗಡಲ್ ದೌಹಿತ್ರವಾತ್ಸಲ್ಯದಿಂ ಲಕ್ಷ್ಮಿ-
ಯಂಗಜಂಗಂಗಜಂಗಾಡಲೆಂದೊಸೆದಿತ್ತ
ಸಿಂಗರಂಬೆತ್ತ ನುಣ್ಮುತ್ತುಗಳ ಪೊಂಬರಿಯಣಮನವಳ್ ತನ್ನಣುಗನಾ
ಮುಂಗಡೆಯೊಳೊಲ್ವಿನಿಂ ಪಿಡಿವುದುಂ, ಕಂಡದಂ
ಕಂಗೊಳಿಪ ಬೆಡಗಿಗಚ್ಚರಿಗೊಂಡು ಮನ್ಮಥಂ
ಪೊಂಗಿ ಪಿಡಿದೆಳೆಯೆ, ಕೆಯ್ಯಿಂ ಬಿಳ್ದ ತಳಿಗೆ ಪೆರೆ
ಮುತ್ತುಗಳೆ ಅರಿಲಾದುವೊ ? ||೨||

ಎಪ್ರಿಲ ೧೯೩೨

ಚಿತ್ರಸೃಷ್ಟಿ

## ೧೩ ತಾರೆಗಳು

ಸುರಲೋಕದೊಳು ದಿವಿಜಪತಿಯ ಮಂದಿರದೊಳ-
ಚ್ಚರಸಿಯರು ನರ್ತಿಸುತಲಿರುವಾಗಳವರ ನಿರಿ-
ಗುರುಳಿಂದಲುದುರುದುರಿ ಬಿದ್ದ ನುಣ್ಮುತ್ತುಗಳೊ ಸುರಕುಜದ
ಬಿಳಿಹೂಗಳೊ

ಗರುಡನಂದಾತ್ಮಜನನಿಯ ದಾಸ್ಯಪಾಶವನು
ಹರಿಯಲೆಂದಿಂದ್ರನನು ಗೆಲ್ದು ಪೀಯೂಷವನು
ತರುತಿರಲು ತುಳುಕಿ ಬಿದ್ದಮೃತ ಬಿಂದುಗಳೊ ಎನೆ ತಾರೆಗಳು
ರಾಜಿಸುವುವು ||೧||

೧೯೨೮

ಚಿತ್ರಸೃಷ್ಟಿ

## ೧೪ ಚಿತ್ರಸೃಷ್ಟಿ

ವಿವಿಧವಿಕಟಾಕೃತಿಯ ಕಿಸುಮುಗಿಲ್ ಪಡುವಲಂ
ಕವಿದು ಕಣ್ಬೊಲನಾಗಿ ನಿಂದ ಪರಿಯಂ ನೋಡ!
ಸುವಿಧಾನಮೀಚಿತ್ರದೊಳಗಿಲ್ಲವಾದೊಡಂ ಸೊಬಗಿಗೇಂ ಕೊರತೆಯುಂಟೇ?
ಅವಿಧಾನದಿಂದಮೇ ರಮಣೀಯಮಾಯ್ತು ಚಿ-
ತ್ರಮಿದು! ಕೌಶಲದ ಕೃತಿಗೇನಾದೊಡೇನೊ ಸಂ-
ಭವಿಸುವುದು ಚೆಲ್ವು! ಕುಂದುಂಟೆ ಶಿಲ್ಪಕೆ ಸೃಷ್ಟಿನಿರ್ಮಾಣ-
ನಿಷ್ಣಾತನಾ? ॥೧॥

ಇದು ಶಾಂತಮಾದುದೆಡೆ; ಜನದ ಸುಳಿವಿಲ್ಲ, ದೂ-
ರದ ಪಕ್ಷಿ ನಲ್ಲಳಂ ಕರೆವ ದನಿ ಮುದಮನೀ-
ವುದು ಮನಕೆ, ನೆರೆಯ ಬೆಳೆವೊಲದ ನರುಗಂಪಿನಿಂ ತಣ್ಗಾಳಿ ಸೊಗಸಾದುದು!
ಮೃದುವಾದುದಾಬೆಳಕು, ಸಂಜೆಯಾಕೆಂಪು ಕಂ-
ದಿದುದೀಗಳೀ ಸೃಷ್ಟಿ ಪೊಸತೊಂದು ಚೆಲ್ವಿಂದೆ
ಪುದಿದೆಸೆವುದೀದೃಶ್ಯಮೀಶಾಂತಿ ನೋವನಾರಿಸಿದುದೈ ನೊಂದ
ಮನದಾ! ॥೨॥

ಇಂದು ಪೂರ್ಣಿಮೆ, ರಜನಿ ರಾರಾಜಿಸುವುದು ಪೂ-
ರ್ಣೇಂದುಮಂಡಳಮಂಡಿತಂ, ತಮಂ ಕಾಣಿಸದು,
ಮಿಂದು ಜಗಮೀಗಳೀಜ್ಯೋತ್ಸ್ನಾಮೃತೋದಧಿಯೊಳೆಸೆವುದತಿ
ಧವಳವಾಗಿ!
ಚೆಂದಮಿದು ಪೆರತೊಂದು! ವಿಶ್ವಮೆಂಬುದು ಚಿತ್ರ-
ಮಂದಿರಂ, ಸೌಂದರ್ಯ ನಿಧಿ ಸೃಷ್ಟಿಕರ್ತನಾ-
ನಂದದಾವಿಷ್ಕೃತಿಗಳೈ ಕ್ಷಣಕ್ಷಣಕೊಗೆವ ವಿಧವಿಧದ ಚಿತ್ರಸೃಷ್ಟಿ! ॥೩॥

ಎಪ್ರಿಲ ೧೯೩೭

## ೧೫ ಕಾರ್ಮೋಡಗಳು

ಅರರೇ ಮುಗಿಲುಗಳಾರಿಗೊ ಹೆದರಿ
ಧರಿಸುತೆ ನವರೂಪವನಡಿಗಡಿಗೆ
ಬಿರುವರಿವುವು ಗೀಳಿಡುತಲಿ ಕಂಬನಿ-
ಗರೆಯುತೆ ಕಿಡುದೆಸೆಯೊದೆಗಿದುದೆನುತೆ ! ||೧||

ಬರುವುವು ಬರುವುವು ಬರುತೆಯೆ ಇರುವುವು
ತೆರಪಿಲ್ಲದೆಯೇ ಪುಡುಪಲಿನಿಂದೆ
ಖರನಖದಂಷ್ಟ್ರಾಯುಧಭೀಕರಕೇ-
ಸರಿ ಬೆಂಬತ್ತಿದ ಕರಿಗಳ ತೆರದೆ ||೨||

ಚಿತ್ರಸೃಷ್ಟಿ

ಮೂಡಣ ದೆಸೆಯಃಲಿ ತಮಗಾಶ್ರಯವನು
ನೀಡಿ ಪೊರೆವರನು ನೋಡಲಿಕೆಂದೀ-
ಮೋಡಗಳೆಡಹುತೆ ಮುಗ್ಗುತೆ ಬೀಳುತೆ
ಓಡುತಲಿರುವುವು ಹಲ್ಗಿರಿಯುತ್ತೆ ! ||೩||

ಹೆದರಿಕೆಯಿಂದೋಡುವುವಾದೊಡೆಯೂ
ಕುದಿಕುದಿಯುತೆ ಹಲ್ಮೊರೆಯುತಲಿಹುವು,
ಗದರಿಸುತಿಹುವಾಕ್ರೋಶದೆ ಕಲ್ಗಳ
ಕೆದರುತೆ ಬೆಂಕಿಯ ಕಾರುತಲಿಹುವು ! ||೪||

ಸುಡುತುರುಳಿಸುವುವು ಹೆಮ್ಮರಗಳನು,
ಕೆಡೆಯಿರಿವುವು ನೆಲೆಮಾಡಂಗಳನು,
ಒಡೆಯಿಡುವುವು ಬೊಬ್ಬಿರಿಯುತೆ ನೆಲವನು,
ತುಡುಕುತೆ ಪುಡಿಗುಟ್ಟುವುವರೆಗಳನು ||೫||

ಮುಸುಗುಟ್ಟುತೆ ಬಲ್ಮುಳಿಸಿಂದರಚುತೆ
ದೆಸೆದೆಸೆಯೊಳು ನೀರೆರಚುತಲಿಹುವು!
ಬೆಸನವು ಬಂದಡಸಿರೆ ಜಳದಂಗಳು
ಮಸಗುತೆ ಕಾದುವ ಪರಿಯದ್ಭುತವು ! ||೬||

# ೧೬ ಜಡವಲ್ಲ ವಿಶ್ವಮಿದು-
# ಚೈತನ್ಯಮಯಮಲ್ಲಮೇ ?

ನಡುವೇಸಗೆಯ ಬಿಸಿಲ ಬಿಸುಪಿನಿಂದುಮ್ಮಳಂ
ಕಡಿದಾಗೆ ಬಸವಳಿದು ಘನರಾಜಿ ಜೊಕ್ಕಳದ
ಕಡಲಮಿದಿರೊಳ್ ಕಂಡು ನೀರ್ಗೆಳಸಿ ಪರಿತಂದು ಪಿಂಡುಗೊಂಡಿಳಿದು
ಬಂದು
ಪೊಡೆ ಕೋಡುವನ್ನವೋಲಾಡಿ ನೀರ್ಗುಡಿದು ಪೋ-
ಪೆಡೆಯೊಳಲ್ಲಿರ್ದ ಬಗೆವಗೆಯ ಬಳ್ಬೆಲೆವರಲ
ಬೆಡಗಿಗೊಲ್ದುಯ್ದ್ದಾರನ್ನಮಣಿಗಳ ಪೊಗರ್ ಸುರಚಾಪ-
ಮಾದುದೇನೋ ! ॥೧॥
ಅಳಿನೀಳರುಚಿಯಂಬುವಾಹಂಗಳೋಳಿ ಬಾಂ-
ದಳದೊಳಂಬುಜಸಖನ ವಿಳಸನ್ಮರೀಚಿಸಂ-
ಕುಳಮನಸವಸದೆ ಕಳವಳಂಗೊಂಡು ಸೊರ್ಕಿನಿಂ ಪೋಗೆ, ಪೊಡೆ ಕಿಡೆ,
ನೋವಿಗೆ
ತಳಮಳಿಸಿ ಮೊಳಗುತ್ತೆ ಬಿಸಿಲುಮಂ ನೀರುಮಂ
ಬಳಬಳನೆ ಕಾರಿದಪುದೆಂಬಿನಂ ನಡುನಡುವೆ
ಚಳಿಲೆಂಬ ಮಿಂಚು ಸೂಸುವ ಸೋನೆ ತೋರುವುದು; ಕಾರ್ಗಾಲ-
ಮೇಂ ಚಿತ್ರಮೋ! ॥೨॥
ಕಡುಮುಳಿದು ಬಲ್ಗಾಳಿಯುಪಟಳಕೆ ಕಾರ್ಮುಗಿಲ್
ಘುಡುಘುಡಿಸುತುರ್ಬಿ ಕೊಬ್ಬುತ್ತೆ ಭುಗಿಲಿಡುತೆ ಕೆಂ-
ಗುಡಿಯುರಿಯನುಗುಳುತ್ತೆ ಬೆಟ್ಟುಗಳೊಳಬ್ಬರಿಸಿ ಸಿಡಿಲಗ್ಗಿಗಳನೆಸೆಯುತೆ
ನಡೆಗೋಂಟೆಗಳ ಬೆಡಗನಾಂತೆಂತು ಪರಿದಪುವೊ !
ಜಡದೊಳೆಂತೀವಗೆಯ ಸಂರಂಭಮೊಗೆದಪುದೊ ?
ಜಡಮಲ್ಲ ! ಜಡಮಲ್ಲ ! ಜಡಮಲ್ಲ ! ವಿಶ್ವಮಿದು ಚೈತನ್ಯಮಯ-
ಮಲ್ಲಮೇ ? ॥೩॥

ಸಪ್ಟೆಂಬರ ೧೯೨೬

ಚಿತ್ರಸೃಷ್ಟಿ

# ೧೭ ಶ್ರೀ ಶೇಷಾಚಲದಲ್ಲಿ

ಮಲೆಮಲೆಗೆ ನೀರ್ಮುಗಿಲ ತೆಳ್ದೆರೆಗಳೆಲರಲೆಪ-
ಕಲೆಯುತೇನೊಸಗೆಯಂ ಮಾಡುವುವೊ ಕಣ್ಗೆ ! ಕೋ-
ಮಲತೆ ಕಾಠಿಣ್ಯಮೆಂಬೆರಡುಮೀಯೆಡೆಯಲ್ಲಿ ಶುಚಿ ! ಮನೋ-
ಮೋಹನಮಿದು !

ಸುಲಲಿತಂ ಚಿತ್ರಮೈ ! ಶಿಲ್ಪಿಗಳ ಶಿಲ್ಪಿ ಕೌ-
ಶಲದ ಕೃತಿಯನೆ ಸುತ್ತಲಿಂತಿರಿಸಿ ಮನದೊಲವ-
ನಲರಿಸುವ ವೈವಿಧ್ಯಮಂ ಕ್ಷಣಕ್ಷಣಕೊದವಿಸುವನದರೊ-
ಳಾಶ್ಚರ್ಯಮೈ ! ॥೧॥

ಮಳೆಯ ಮುಸುಕೀಗಳೆಲ್ಲೆಲ್ಲಿಯುಂ ನೋಡೆ; ಮಲೆ-
ಗಳ ಸಾಲ್ಗಳಡಗಿದುವು, ವೈವಿಧ್ಯಮುಡಗಿದ-
ತ್ತಿಳೆಯಿಂದೆ ಬಾಂಬರಂ ನೀರೆ ! 'ಆಪೋ ವಿಶ್ವ' ಮೆಂಬುದಂ ಕಂಡೆನಿಂದು!
ಮಳೆ ನಿಂತುದೊಯ್ಯನೊಯ್ಯನೆ, ನೋಡ, ನೀರ್ಪೊನ-
ಲ್ಗಳಿವಮವು ಎತ್ತಲುಂ ಸ್ವಚ್ಛಂದದಿಂದದೇಂ
ಕಳಕಳನಿನಾದದಿಂ ಗಿರಿಗಹ್ವರಂಗಳಂ ತುಂಬುತುಂ ಪರಿವರಿವುವೋ ! ॥೨॥

ಕರಗೆ ಮುಗಿಲಿತ್ತಲೊಂದೆರಡು ಮತ್ತತ್ತಲೊಂ-
ದೆರಡು, ಬೇರೊಂದು ಚೆಲ್ವೊಗೆದತ್ತು ! ದೂರದಾ-
ಗಿರಿಯ ಮೇಲಲ್ಲಿ ಬಿಸಿಲಲ್ಲಿ ನೆಳಲಿದೊ ಇದೋ ಬಿಸಿಲ ಕೆರೆ ಮತ್ತಿದಿಲ್ಲಿ !
ಕೆರೆಯಲ್ಲಿ ನೌಕೆಗಳ್ ! ಮತ್ತಿದೇಂ ? ನೌಕೆಗಳೆ
ಪಿರಿದಾಗಿ ನೀರನೇ ಮುಚ್ಚಿದುವು ! ಕೆರೆ ಪೋಯ್ತು !
ಚಿರಮೆಂಬುದಿರದಾದೊಡಂ ಸೃಷ್ಟಿಗಸ್ಥಿರತೆಯಿಂದದೇಂ
ಚೆಲ್ವಾದುದೋ ! ॥೩॥

ಮೇ ೧೯೩೭

ಚಿತ್ರಸೃಷ್ಟಿ

## ೧೮ ಬೆಳ್ದಿಂಗಳಲ್ಲಿ

ಇಂದಿನೀಬೆಳ್ದಿಂಗಳೊಳ್ಪಪೂರ್ವಂ ! ಶಾಂತಿ–
ಯಿಂದಿದರ ಸೊಬಗು ಪೆರ್ಚಿದುದು ! ನಿಶ್ಚಲಚಿತ್ತ–
ದಿಂದದೇನನೊ ಜಾನಿಸುತುಮಿರ್ಪುದೈ ಸೃಷ್ಟಿ ! ಶಾಂತಿಯೇಕಲ್ಲದೊಡಿದು ?
ಎಂದು ಸರಿದುದು ಪಿಂತೆ ಪೊಳ್ತಿಂತು ಮೆಲ್ವೆಜ್ಜೆ–
ಯಿಂದೆ ? ಸಂತತಗತಿ ಸಮೀರನುಂ ಮಿಸುಕದೆಯೆ
ನಿಂದನೈ ? ಧ್ಯಾನದೊಳ್ ನಿಂದ ಸೃಷ್ಟಿಯ ಪೆಂಪನೀಕ್ಷಿಸುತೆ
ಮೆಯ್ಮರೆದನೈ ! ॥೧॥

ಚಿತ್ರಸೃಷ್ಟಿ

ಅರರೆ, ಏನಿದು ? ಚಂದಿರನ ಬಳಿಯ ಬೆಳ್ಮುಗಿಲ್
ಕಿರಿದಾಯ್ತು, ಕಿರಿದಾಯ್ತು ! ಮತ್ತಿನಿತರೊಳೆ ಕಣ್ಗೆ
ಮರೆಯಾಯ್ತು ! ಕಾಣಿಸದ ನಾಲಗೆಯದಾವುದೋ ನೆಕ್ಕಿದುದು !
ಚಿತ್ರಮೆನಿತೋ !

ಹರಿ, ನಿನ್ನ ಮಾಯೆ ಪರಮಾದ್ಭುತಂ ! ಸೃಷ್ಟಿಯ-
ಚ್ಚರಿಯಾಗರಂ ! ತಿಳಿದರಾರಿದಂ ? ನರನೆ, ನೀ-
ನರಿತಿರ್ಪುದಲ್ಪಮತ್ಯಲ್ಪಮೈ ! ನಿನ್ನಳಮೆ ಈಯನಂತಮನರಿವುದು ? ॥೨॥

ಇನಿದಿನಿದು ಬಿರಿವೂಗಳಿಂದೊಗೆವ ಕಂಪು ! ಸೊಂ-
ಪಿನ ಸುಗ್ಗಿ ! ಮಧುರಮೀಮೇಲನಂ ! ಶಾಂತಿ, ತ-
ಣ್ಪಿನಿಗಂಪು, ನೆಲ್ವೆಳಕು! ಪೆಂಪೆನಿತೊ ಇಂತು ಸಮ್ಮೇಲನಂ ಮಧುರಮಾಗೆ !
ಧನದಿಂದೆ ಬಂದುದಿಲ್ಲಂ ಸಂತಸಂ ದಿವ್ಯ-
ಮೆನಗೀಗಳಿಂದು; ನೀಂ ಕಾರುಣ್ಯನಿಧಿ; ಅಕಿಂ-
ಚನಜನನುಮಾಗನ್ಯೆ ಬಾಹಿರಂ ನಿನ್ನ ನಲ್ಮೆಗೆ, ದೇವ, ವಿಶ್ವಪಾಲಾ ! ॥೩॥

ಬಿರುಗಾಳಿಯೊರ್ಮೊದಲೆ ಬೀಸಲೆಸಗಿದುದಾದೊ-
ಡಿರುಳ ಶಾಂತಿಗೆ ಭಂಗಮಿನಿತುಮಿಲ್ಲೆಂಬುದ
ಚ್ಚರಿಯಲ್ತೆ ? ಈ ಮಹಾನಿನದದೊಳ್ ದಿವ್ಯಸಂಗೀತಮೆಂತೊ-
ದವಿದಪುದೋ ?

ಸರಸಮೀಸಂರಂಭಮಿದನೆಂತು ಹರ್ಷನಿ-
ರ್ಭರನಾಗಿ ಸವಿಯುತಿರ್ದಪನೊ ಬಿದು ! ದೇವನೈ-
ಸಿರಿಯ ಸೊಬಗಿನ ಬಗೆಯೆ ಬೇರೆಯ್ಯೆ ! ಸವಿಯಿದಂ, ಮನಮೆ, ನೀಂ
ನಮ್ರನಾಗಿ ॥೪॥

೧೦ ಫೆಬ್ರುವರಿ ೧೯೩೮

ಚಿತ್ರಸೃಷ್ಟಿ

## ೧೯ ಕಳ್ತಲೆಯೊಳ್ಪು

ಅಂದು ಬೆಳ್ದಿಂಗಳೊಳ್ಪಾಬಗೆಯದಿರ್ದುದೈ;
ಇಂದು ಕಳ್ತಲೆಯೊಳ್ಪಿಗಿಲ್ಲಮಿನಿತಾದೊಡಂ
ಕುಂದು. ನಕ್ಷತ್ರ ಪುಂಜಂಗಳಿಂದಾಗಸದ ಪೆಂಪು ವಿಸ್ಮಯಕಾರಿಯೈ !

ಎಂದಿನದೊ ನಕ್ಷತ್ರಪುಂಜಂಗಳೀರಚನೆ-
ಯೆಂದಿನದೊ ? ಬಲ್ಲರಾರ್ ! ಅಂದಿರ್ದ ತೆರದಿಂದ-
ಮಿಂದುವರ ಮಿರ್ಪುದೈ ! ಅದ್ಭುತಂ ಕೃತಿಕೌಶಲಂ ಸೃಷ್ಟಿಕರ್ತಾರನಾ! ||೧||

ಒಂದೊಂದು ನಕ್ಷತ್ರವೊಂದೊಂದು ಲೋಕಮೆನಿ-
ತೊಂದು ವಿಶ್ವದ ಬಿತ್ತರವೊ ? ವಿಶ್ವಮೂರ್ತಿ, ನಿ-
ನ್ನಿಂದಮಿದೊ ? ನೀನೆ ಇದೊ ? ಕೋ ವೇದ ? ದೇವ, ಸರ್ವಾಧ್ಯಕ್ಷ ,
ಪುರುಷೋತ್ತಮ !

ಸೌಂದರ್ಯಮೀವಿಶ್ವದಾನಂತ್ಯಮುಂ ಪ್ರಕಟ-
ಪಂದದಿಂದಿರುಳ ಕಳ್ತಲೆಗಲ್ತೆ ? ಪೆಂಪುಮಿದ-
ರಿಂದಲ್ತೆ ? ಪಲತೆರವೆ ನೊಂದ ಮನಕೀಗಳಾನಂದಮಿದರಿಂದಮಲ್ತೇ ||೨||

೨೬ ಫೆಬ್ರುವರಿ ೧೯೩೮

ಚಿತ್ರಸೃಷ್ಟಿ

## ೨೦ ತೆರೆ

ತೆರೆಗಳುರುಳುರುಳುತುಂ ಬಂದೊಡೆಯೆ ಪುಟಿವ ಶೀ-
ಕರವಿತಾನಂಗಳೊಳ್ ಜಳಧಿಗತಮಣಿನಿಕರ-
ಸುರುಚಿರಪ್ರಭೆಗಳಿಂದಾದುದೆನೆ ಸುರಧನುಃಪ್ರತತಿಯೇಂ
ಸೊಗಯಿಸುವುದೊ !
ತೆರೆವೊಯ್ಲುಗಳನಿಂತು ಸ್ವೈರಿಸುತುಮಿರ್ಪುವನ-
ವರತಮೀಪೆರ್ಗಲ್ಲುಗಳೆಂತೆಂಬುದೆಣಿಕೆಯೇ ?
ಅರಿದಲ್ತು, ಸೌಂದರ್ಯಪೀಯೂಷಸೇವನಂ ವ್ಯಥೆಗಳಂ ಮರೆ-
ಯಿಸುವುದು ! ॥೧॥

ಕಡಲಲೆಗಳಲೆಪದಿಂದೇಳ್ವ ನಿಡುದನಿ ಸೊಗಸು-
ಗಡಲಲೆಗಳುಲಿಯಿದೆನೆ ಕಿವಿ ತಣಿಯೆ ಕಡುಸೊಂಪು-
ವಡೆದೆತ್ತಲುಂ ಪರ್ಬುತಂಬುನಿಧಿಯುಳವಟ್ಟ ಗುಣ್ಪನೇಂ ಸೂಚಿಸುವುದೊ !
ಅಡಿಗಡಿಗೆ ನೊರೆವಿಡುತೆ ನಳಿಯುತೊಯ್ಯಾರದಿಂ-
ದೊಡನೊಡನೆ ಬರ್ಪೆಸೆವ ಸುಳಿದೆರೆಗಳೊಳ್ ಬೆರಗು-
ವಡೆದೆಂತು ಸುತ್ತುವರಿದಪುವು ಕಣ್ ! ಚೆಲ್ವು ಕಣ್ಗಳನೆಂತು
ಮೆಚ್ಚಿಸುವುದೋ ! ॥೨॥

ಅಕ್ಟೋಬರ ೧೯೨೭

ಚಿತ್ರಸೃಷ್ಟಿ

## ೨೧ ಪಸಲೆ

ಅರೆವಿರಿದ ನರುಗಂಪಿನಲರ ಪಸದನದಿಂದೆ
ಕರಮೆಸೆವ ಬಳ್ಳಿಗಳ ತಳ್ಕೆಯಿಂ ನಲ್ವಾಂತ
ತರುರಾಜಿ ಸುತ್ತಲುಂ ಕಂಗೊಳಿಸೆ, ಬಿತ್ತರದ ನುಣ್ಬಸಲೆ ಚೆಲ್ವೆಸೆವುದು!
ಮರಕತದಿನಾದುದೆನೆ ಪಸಿರೇರಿ ತಳತಳಿಪ
ತಿರೆಯ ಮೇಲಿದೆ ನೋಡ ಕಡೆಸಾಲ್ಗಳೆಂಬಿನಂ
ಕಿರುವುಲ್ಗಳೊಳ್ ಜೇಡಬುಳುವ ಜಾಲಂ ಮಂಜುವನಿಗೂಡಿ
ಬಗೆಗೊಳಿಪುವು ! ||೧||
ನಲಿನಲಿದು ಪಕ್ಷಿಗಳ್ ಪೊಳ್ತರೆಯ ಚೆಲ್ವಿನಿಂ-
ದುಲಿದಪುವು ನಿಡುಸರದೆ ಕಿರುಸರದೆ, ನಲ್ಸರದೆ;
ಕಲರವಂ ಕಂಪುವೆರೆದೆಳಗಾಳಿಯೊಳ್ ಬೆರೆತು ಮನಕದೇಂ
ಮುದವೀವುದೋ
ಲಲಿತತೆಯ ನಿಲಯಮೋ ಶಾಂತಿಯಾವಾಸಮೋ
ಒಲವಿನಾಗಾರಮೋ ನೈರ್ಮಲ್ಯದೆಡೆಯೊ ಮಂ-
ಗಲದ ಕೇತನವೊ ನಲ್ಸೊಗದ ತಾಯ್ಮನೆಯೊ ಈ ಪಸಲೆ! ಬಹುರೂಪಿ
ಚೆಲ್ವು ! ||೨||
ಎನಿತೊಂದಲಂಪು ಗಡ, ಪೆಂಪು ಗಡ, ಮಂಗಲಾ-
ತ್ಮನೆ, ಸುತ್ತಲುಂ ನೋಡಲೆಲ್ಲೆಡೆಯೊಳಂ ನಿನ್ನ
ಘನತೆಯೇಂ ಸೊಂಪೇರಿ, ಸಿರಿನಲ್ಲ, ನಲ್ಸೊಗಮನೊದವಿಸುತೆ
ನೆಲಸಿರ್ಪುದೋ!
ಮನದಳಮೆ ಈ ಸಿಂಗರದ ನೆಲೆಯನರಿಯಲ್ಕೆ?
ಕೊನೆಯಿಲ್ಲ, ಮೊದಲಿಲ್ಲ ನಿನ್ನ ಸೃಷ್ಟಿಯ ಸಿರಿಗೆ !
ದಿನದೊಳೋರೊಂದು ಬಗೆ, ರಾತ್ರಿಯಲ್ಲೊಂದು ಬಗೆ! ಸಿರಿಯ
ವೈವಿಧ್ಯವೆನಿತೋ! ||೩||

**ಮಾರ್ಚಿ ೧೯೨೬**

## ೨೨ ಸ್ವಪ್ನಸೃಷ್ಟಿ

ಗಗನದಾಚೆಯ ವಿಶ್ವಮಂ ಕಾಣಲೆನೆ ನೀಳ್ದ
ನಗದ ಸೊಬಗಂ ನೋಡ! ತುಂಗ ತರುರಾಜಿಗಳ
ಸೊಗಯಿಸುವ ಪಸಿರ ಪರ್ಬುಗೆಯೊಳುಲ್ಲಾಸದಿಂ ತನ್ನಿಚ್ಛೆಯಿಂದಾಡುತ್ತೆ,
ಉರುಳುತುಂ ಬೆಳ್ನೊರೆಗಳಂ, ಮಹಾಶಿಲೆಗಳಂ
ಧಿಗಿಲೆಂದು ರಭಸದಿಂ ಪಾಯ್ದು ಕಣ್ಗೊಳಿಪ ಬೆ-
ಳ್ವೊಗೆಗಳಂ ಸೃಜಿಸುತುಂ, ಪರಿವರಿವ ಬಲ್ದನಿಯ ಬೆಳ್ದೊರೆಯಿನೆನಿತು
ಚೆಲ್ವೋ! ॥೧॥

ಇದರ ಶಿಖರಮನೇರಿ ತಿರೆಯಂದಮಂ ಸವಿಯ-
ಲಿದೊ ನೋಡ, ಮೇಲೆ ಮೇಲಕೆ ಪಾರಲುಜ್ಜುಗಿಸು-
ವುದು ಮುಗಿಲ್ ನಿರ್ನೆರಂ! ದಣಿಸೊರಲ್ವಪುದೆನಿತೊ! ಆಯಸವೆ
ಪನಿಪನಿವುದು!

ಎದೆಗುಂದಿ ನಡೆಗೆಟ್ಟುದಂ ಕಂಡು ಪಲ್ಗಿರಿಯು
ತದನೊಡಲೊಳಿರಿಸುತಾರ್ಭಟಿಸುತ್ತೆ ಮುಂದುವರಿ-
ವುದು ನೋಡ ಪೆರತೊಂದು ಪೆರ್ಮುಗಿಲ್! ದುರ್ಬಲರ್ ಬಲ್ಲಿದರ
ಬಾಯ್ಗೆ ತುತ್ತೋ! ॥೨॥

ನರುಗಂಪಿದೆತ್ತಣಿಂದ್ಯೈ? ಅಮಮ ನೋಡಿಲ್ಲಿ
ಸುರುಚಿರಂ ವಿವಿಧ ವರ್ಣೋತ್ಕರಂ! ಕುಸುಮಸಾ-
ಗರಮಲೇ! ವಾಯುಚಲನಕೆ ವೀಚಿಮಾಲೆಗಳ ಲಾಸ್ಯಮೇನೆರ್ದೆ-
ಗೊಳಿಪುದೋ!

ಪರಿಮಳಮನುಂಡು ಬಗೆದಣಿಯೆ ಸಂತಸದಿನಿಂ-
ಚರದಿಂದೆ ಮೊರೆಯುತುಂ ಸ್ವಚ್ಛಂದದಿಂದೆ ಸಂ-
ಚರಿಸುವೀ ಮರಿದುಂಬಿವಿಂಡಾವ ಸುಕೃತಮಂ ಗೈದಿಂತು
ಕೃತಿಯಾದುದೋ ॥೩॥

ಗಿರಿ ಗಗನಮಂ ಭೇದಿಸುವುದತ್ತಲಿತ್ತಲೀ–
ತೊರೆ ತಿರೆಯನೊಡೆದು ಕಿನ್ನೆಲಕೆ ನುಗ್ಗಲ್ ಬಗೆದು
ದರಿಯಾಳಮಂ ಪೊಕ್ಕು ನೆಲಮನೇ ಕೊರೆದಪುದು! ಅಲ್ಲದೊಡೆ
ಪೇಳದೆಂತು

ಬಿರುಸರಕ್ಕೀ ದರಿಯೊಳಾಸ್ಪದಂ ? ದಿಕ್ಸಂಧಿ
ಬಿರಿವುದಿದರಿಂದೆ ! ಸಂರಂಭಮಿದು ಮನದೊಳ–
ಚ್ಚರಿಯನೆನಿತೊದವಿಪುದೊ ! ಸತ್ಯಮೈ ಸೃಷ್ಟಿಕೃತಿ ಕೌತುಕಾಸ್ಪದ–
ಮೆಂಬುದು ||೪||

ಇದರ ನೆರೆಯೊಳ್ ಮನದ ಮಾಲಿನ್ಯಮುಳಿಯದೈ !
ಇದರ ಗಾಂಭೀರ್ಯಮೇಂ ಪಾವನಮೊ! ಕಾರ್ಪಣ್ಯ–
ಮಿದರಿದಿರೊಳಿರಲಾರ್ಪುದೇ ? ಕ್ಷುದ್ರದೌರ್ಬಲ್ಯಮೇಂ ಹೃದಯಮಂ
ತೊಲಗದೇ ?

ಇದರೆಡೆಯೊಳಿರದು ಸಂಸ್ಕೃತಮನಕ್ಕಸ್ಥಿರತೆ.
ಇದು ಪುಣ್ಯಭಾವನೆಗೆ ನೆಲೆವೀಡು ! ಕಾಣನೇ–
ನಿದರಲ್ಲಿ ಸೃಷ್ಟಿಕರ್ತನ ಮೈಮೆಯುಂ ನರಂ ? ದೇವತಾತ್ಮಾ,
ನಮಸ್ತೇ! ||೫||

ಇನಿತು ಸೊಗಮಂ ತಳೆಯಲೇನಿನಿತು ಪಿರಿದಾಯ್ತೊ
ಮನಮೆನ್ನದುತ್ತುಂಗ ಗಿರಿಯವೋಲ್ ? ಪರಿಯೆ ಬಂ–
ಧನಜಾಲಮೊಂದೊಂದೆ, ನೈಜರೂಪಮನಾಂತಿದೇನಿನಿತು
ಪಿರಿದಾದುದೋ ?

ಅನುಭವಮಿದೆನಗಪೂರ್ವಂ ದಿಟಂ ! ತಂದುದೆ–
ನ್ನನದಾವ ಸುಕೃತಮೀಯೆಡೆಯಲ್ಲಿ ? ನೈರ್ಮಲ್ಯ–
ಕೆನಿತೊಂದು ಶಕ್ತಿ ? ಭೇದಿಸಿ ಬಂಧನಂಗಳಂ ಸ್ವಾತಂತ್ರ್ಯವನೆ
ಇತ್ತುದು ! ||೬||

೭ ಜುಲೈ ೧೯೩೬

ಚಿತ್ರಸೃಷ್ಟಿ

## ೨೩ ಪುಲ್ಗಡಲು

ಎಳವೆಲರ ಸೋಂಕಿನಿಂ ನಿಡುಬೆಳೆದ ಪುಲ್ಲು ಪೊಂ-
ಪುಳಿವೋಗಿ ಬಳ್ಕುತುಂ ಬಾಗುತ್ತುಮೇಳುತುಂ
ಜಳನಿಧಿಯ ಚಳದೂರ್ಮಿಮಾಲೆಯಂ ಪೋಲ್ತು ಕಣ್ಬೊಲವಾಗಿ
ಸೊಗಯಿಸುವುದು

ಬಳಸಿರ್ದು ಸುತ್ತಲುಂ ಚೆಲ್ವೆಸೆವ ಪುಲ್ಗಡಲ
ಕೆಳಗಿಂದೆ ಮೇಲೆಳ್ದು ಬಾಯ್ದೆರೆವ ಸಿಂಪುಗಳ
ಬಳಗಮೆನೆ ಪೂಗಳಿವು ಕಣ್ಗೊಳಿಸೆ ಮಂಜುವನಿ ಮುತ್ತುವೊಲ್
ರಂಜಿಸುವುವು ||೧||

ಎಪ್ರಿಲ ೧೯೨೮

ಚಿತ್ರಸೃಷ್ಟಿ

## ೨೪ ಚಂದ್ರ

ತೆರತೆರದ ಸೌಂದರಂಗಳನಂಬುಜಾಸನಂ
ಪರಿರಚಿಸಿ ಮಿಕ್ಕ ಲಾವಣ್ಯಮಂ ರಾಸಿಗೈ-
ದಿರಿಸಿದಂಪದೆ ಬಾನೊಳಿಂಗದಿರನೊಪ್ಪುಗುಂ ಕಣ್ಗೆ ಸೊದೆಯನೆ ಉಣಿಸುತೆ!
ನೆರೆಜವ್ವನದ ಪೆಣ್ಣ ಬಟ್ಟನುಣ್ಮೊಲೆಯ ಕುಡಿ-
ಗರೆಯಂತೆ, ಬೆಳ್ನೊಸಲೊಳೊಲೆವ ಮುಂಗುರುಳಂತೆ
ನೆರವೆರೆಯ ಕರ್ಪದೇಂ ಗಡ ಮನಂಗೊಳ್ವುದೋ! ಚೆಲ್ವಂಗದೇಂ
ಸಲ್ಲದು? ||೧||

ಸಪ್ಟೆಂಬರ ೧೯೨೬

## ೨೫ ಮೆಲ್ಗಾಳಿ

ಬಾರಾ, ಬಾರೈ ಮೆಲ್ಗಾಳಿ !

ಪ್ರೇಮತರಂಗತುಷಾರದೆ ನಾಂದು
ಬಾರಾ, ಬಾರೈ ಮೆಲ್ಗಾಳಿ !

ಸುಜನರ ನಲ್ನುಡಿಯೊಲ್ಪಿನೊಳಾಳ್ದು
ಬಾರಾ, ಬಾರೈ ಮೆಲ್ಗಾಳಿ !

ಸತಿಯರ ಸುಕೃತಾಮೃತದೊಳು ಮಿಂದು
ಬಾರಾ, ಬಾರೈ ಮೆಲ್ಗಾಳಿ !

ಪಾವನರಂಗದ ಪುಣ್ಯದೊಳೊಂದಿ
ಬಾರಾ, ಬಾರೈ ಮೆಲ್ಗಾಳಿ !

ವಿಮಲರ ಹೃತ್ಸುಮಗಂಧದೆ ಬಲಿದು
ಬಾರಾ, ಬಾರೈ ಮೆಲ್ಗಾಳಿ !

೧೯೩೭

# ೨೬ ಮೃದು-ಸವಿ

ಮೃದುವಾಗಿರುವುದು ಸವಿಯಾಗಿರುವುದು
ಹೃದಯದ ಹಾಡಿನ ಮಾರ್ದನಿಯೆನಲು ||ಪ||

ಮುಗಿಲುಗಳಾಗಸವನು ಮುಸುಕಿರುವು,
ನಗುತಿಳೆಯೊಳು ಹೂ ಮಗಮಗಿಸುವುವು;
ಸೊಗಸಿನಲೀಯೆರಡನು ತಳೆದೊಡಲಲಿ
ಬಗೆವುಗೆ ಸುಣ್ಣನಿ ನವಿ ವಹಿಸುವುದು ||೧||

ತಳಿರೊಳು ಕುಣಿಯುತೆ ಪೊಸವೂಗೊಂಚಲ-
ಗಳ ಸೆಂಡಾಡುತೆ ಬಲ್ವಿದಿರುಗಳಾ
ಮೆಳೆಗೈತಂದೊಲವಿಂದಲಿ ನಿಂದು
ಕೊಳಲನು ಬಾಜಿಸುವುದು ತಣ್ಗಾಳಿ ||೨||

ಈ ಗಿಡದೆಳದಳಿರೊಳು ಮೆಯ್ಗರೆದು
ಕೋಗಿಲೆ ಕರೆವುದು ನಲ್ಲಳನೊಸೆದು
ಆ ಗಿಡದಿಂ ಪೆಣ್ಗೋಗಿಲೆ ಉಲಿವುದು
ಬೀಗಿ ಬೀಗಿ ನಲ್ಲನ ದನಿಗೇಳ್ದು ||೩||

ಎಡೆಗಿಡಿದಲರುಗಳಿಂ ಚೆಲ್ವೆಸೆವಾ
ಗಿಡದೆಡೆಯಿಂದಲಿ ಬರುವಿಂಚರವು
ಒಡನಿನಿಯನ ದನಿಯೆಂದರಿತಂಗನೆ
ನಡೆತರೆ ನೇವುರದುಲಿ ಸೊಗಯಿಪುದು ||೪||

## ೨೭ ನಲಿಯರಾರು ?

ಸುರುಚಿರಂ ಸೃಷ್ಟಿಸೌಂದರ್ಯಮಿದು ! ಸುತ್ತಲುಂ
ನಿರಿದಳಿರ ಗೊಂಚಲ್ಗಳಿಂ ಕರಂ ಚೆಲ್ವೆಸೆವ
ತರುಗಳಂ ತಳ್ಕೈಸಿದೆಳವಳ್ಳಿ ತಣ್ಣೆಲರ ಸೋಂಕಿನೇಂ ನಲವಾಂತುದೊ !
ಬಿರಿಪಲರ ಮಕರಂದಮಂ ಸವಿದು ಸೊಗವಾಂತು
ಮೊರೆವ ಮರಿದುಂಬಿಗಳ ಸಂಗೀತದಿಂಚರಂ
ಕರೆದಪುದು ಪೀಯೂಷಮಂ ಕಿವಿಗೆ ! ಸರ್ವಾಂಗ ಸಂತರ್ಪಿ
ಚೆಲ್ವಿದಲ್ತೇ ? ||೧||

ಎಲೆ ಇದೇನವಿರತಂ ಕೂಗುವುದು ಕೂಗುವುದು
ಕೆಲದ ಮರನೆಳದಳಿರೊಳಲ್ಲಿ ಮೈಯ್ಗರೆದು ಕೋ-
ಗಿಲೆಯೊಸೆದು ನಲ್ಲಳಂ ಕರೆಯುತುಂ ಪೆರ್ಚಿಸುತೆ ಮಾಧುರ್ಯಮಂ
ಶಾಂತಿಯಾ !

ಪಲತೆರದ ವೇದನೆಗೆ ಪಕ್ಕಾಗಿ ನೊಂದು ವಿ-
ಹ್ವಲಮಾದ ಹೃದಯಮಿಂಚರದ ಸೊದೆಯಂ ಸವಿದು
ನಲಿನಲಿದು ನಿರ್ಮಳಾನಂದದೊಳ್ ಮೈಯ್ಮರೆವುದೀಯೆಡೆಯ
ಸೊಗಸಿದೆನಿತೋ ! ||೨||

ಎಳವಿದಿರ ಮೆಳೆಗಳೊಳ್ ಸೊಂಪೆನಿತೊ ! ಬಗೆವಗೆಯ
ಕಳರುತಿಗಳಿಂಪಿನ್ನೈಸಿರಿ ! ಸೃಷ್ಟಿಲಕ್ಷ್ಮಿಯ-
ಗ್ಗಳದ ಕಾಲಂದುಗೆಯ ಕಿರುಗೆಜ್ಜೆಗಳಿನುಗುವ ನಲ್ಲುಲಿಯಲಂಪಿದೇನೊ ?
ಎಳಗಾಳಿ, ಎಳವೆಳಕು, ಶಾಂತಿ, ಸಂಗೀತದೀ-
ಕಳನಿನಾದದ ಪೆಂಪು, ನಲ್ಸೊಗದ ಚೆಲ್ವು ಬಗೆ-
ಗೊಳಿಸುತಿರೆ, ಮನಮೊಲ್ದು ನಲಿಯರಾರೀ ಪಕ್ಷಿಗಳ ತೆರದೆ
ಕಲೆಯರಾರೋ ? ||೩||

೧೯೨೯

## ೨೮ ಕೊಡಗು

ಕೊಡಗು ಬೆಡಗಿನ ಬೀಡು ! ಸೌಂದರ್ಯದಮೃತಮಂ
ಕುಡಿಯಿಮೆಲೆ ಕಣ್ಗಳಿರ ! ಇದೊ ಮಂಜು ಬಿತ್ತರಿಸಿ
ಕಡಲವೊಲ್ ತೋರ್ದಪುದು ಮೇಲೆಳ್ದ ಗಿರಿಸಾನುಗಳ್
ದ್ವೀಪನಿವಹವಾಗೆ

ಅಡಿಯಿಂದೆ ಮುಡಿವರಂ ಬೆಟ್ಟುಗಳ್ ನೀಳ್ದಿಸೆವ
ಗಿಡುಗಳಿಂ ಪಸಿರೇರಿ ಸೌಂದರ್ಯದಧಿದೇವಿ–
ಯೆಡೆಯಾಡುವೊಳ್ಪುವೆತ್ತೆಡೆಗಳಾಗಿತ್ತಲಿದೊ ಸೊಗಯಿಪುವು
ಸೊಂಪುವೆತ್ತು ! ॥೧॥

ಬಿಸಿಲೆಲೆಗಳೊಳಗಿಂದೆ ಸೋಸಿ ಬರ್ಪುದು ಮತ್ತೆ
ಪಸಿರಮೇಲ್ ನೀರ ಮೇಲಲೆವೆಲರ್ ಸುಳಿದಪುದು;
ಬಿಸುಪಳಿಯದಿರ್ದಪುದೆ ? ಕೊಡಗು ತಣ್ಣೆಳಲ ತವರೂರಲೇ ತಣ್ಪಿನಿಂಬು !

ಚಿತ್ರಸೃಷ್ಟಿ

ಪೊಸತೆರದ ಬಗೆವಗೆಯ ವಿಹಗಂಗಳೆತ್ತಲುಂ
ಮಿಸುಪ ಮೈವಣ್ಣದಿಂ ಮನವೊಲಿಪ ಮಾಟದಿಂ-
ದೆಸೆದು ಸುಣ್ದನಿಗುಡುತೆ ನಲಿದಪುವು; ಮನಮಿಲ್ಲಿ ನಲ್ಪಗೆಗಳೆಡೆ-
ಯಾದುದು ! ||೨||

ಪರಿವ ಕಾಳ್ಪುರದ ಮೆಲ್ಲುಲಿಯಿಂದೆ ಬಗೆಗೊಳಿಪ
ದರಿಯಿತ್ತಲುತ್ತುಂಗಶಿಖರಂಗಳಿಂದೆಸೆವ
ಗಿರಿಯುತ್ತಲೇಂ ಪೆಂಪೊ ! ತೆಂಬೆಲರ ಸೊಗಯಿಸುವ ಸೋಂಕಿನಿಂ
ಸೊಗಮಿದೆನಿತೊ !

ಬಿರಿವೂಗಳಿನಿಗಂಪಿಗೆನಿತೊಂದು ತುಂಬಿಗಳೊ !
ಸುರಯುವತಿಯರ್ ನಲ್ಲರೊಡನಿಲ್ಲಿ ಸಾರ್ತಂದು
ಸರಸವಾಡಲ್ಕುಚಿತಮಾದ ನೆಲಮಿದು ! ಕೊಡಗು ಕರುನಾಡ
ಮುದ್ದುಗೂಸು ! ||೩||

ಚೆಲುವಿನೀ ಕಡಲೊಳಗೆ ಸಾಲ್ವಿಡಿದು ಸೊಂಪೆಸೆವ
ಮಲೆಗಳಿವು ಸವಿಕಂಪತರುರಾಜಿಗಳಿನದೇ-
ನಲೆವಲೆವ ತೆರೆಗಳಂತೆಸೆದಪುವೊ ! ನವವೃಷ್ಟಿಯಿಂ ಸೃಷ್ಟಿಗೇಂ
ಕಾಂತಿಯೊ !

ನೆಲವಾಗಸಂ ದಿಕ್ಕುಗಳ್ ರಾಮಣೀಯಕದ
ನಿಲಯಂಗಳಿವನೆನಿತು ನೋಡಿದೊಡಮಕ್ಷಿಗಳ್
ತೊಲಗಲೊಲ್ಲವು, ಮನಂ ತಣಿಯದೋಲಾಡಿ ಸೌಂದರ್ಯದೀ
ಜಳಧಿಯಲ್ಲಿ ! ||೪||

ಬಂದೆನಾನಿಲ್ಲಿಗೆನ್ನಳ್ಕರಿನ ತಾಯ್ನೆಲದ
ಚೆಂದಮಂ ನೋಡುತುಂ ಶ್ರೀನಿವಾಸನ ನಲ್ಮೆ-
ಯಿಂದೆ ಸುಖದಿಂದೆ ಸಂಚರಿಸುತುಂ; ಬಹುಕಾಲದಿಚ್ಛೆ ಕೈಗೂಡಿತಿಂದು !

ಚಿತ್ರಸೃಷ್ಟಿ

ಎಂದು ಕಣ್ತುಂಬಿ ಕರುನಾಡ ಚೆಲುವಂ ಕಾಣ್ಬೆ-
ನೆಂದು ಮನದೊಳಗನಿಶವಾಗೆ ಚಿಂತಿಸುತಿರ್ದೆ-
ನೆಂದು ತಿಳಿದಿರ್ದರಾರಿಂತು ಸೊಬಗಿನ ಸುಗ್ಗಿಯಿದಿರೊಳಾಂ
ನಿಲ್ಪೆನೆಂದು ? ||೫||

ಎನ್ನ ನಾಡಂದಮಿಂತೆಂದು ಭಾವಿಸಿದೆನಿ-
ಲ್ಲಿನ್ನೆಗಂ ! ಭಾವನೆಗೆ ಚೆಂದಮಿದು ನಿಲುಕುವುದೆ ?
ನಿನ್ನ ಸೌಂದರ್ಯಮಿದು ನಿನ್ನ ಪೆರ್ಮೆಯ ಕುರುಪು ! ಕರುನಾಡೆ
ಪುಣ್ಯಭೂಮಿ !

ಇನ್ನರಿವುದರಿದಲ್ತು ನಿರ್ಮಳಾಂತಃಕರಣ-
ರುನ್ನತಗುಣೋದಯರ್ ಮಂಗಳನಿಕೇತನರ್
ನಿನ್ನೊಡಲೊಳಿಂತುದಯಿಸಿದರೆಂದು ! ಕರುನಾಡು ದೇವರಳ್ಕರಿನ
ನಾಡು ! ||೬||

ದರಿಗಳಿರ, ಗಿರಿಗಳಿರ, ಝರಿಗಳಿರ, ಮೃಗಪಕ್ಷಿ-
ತರುಗಳಿರ, ಪೂಗಳಿರ, ತೆಂಬೆಲರೆ, ಬೆಳ್ಮಂಜೆ,
ನರುಗಂಪೆ, ಇಂಚರವೆ, ಬೀಳ್ಕೊಳ್ವೆನೈ ! ನಮೋ ! ನಿಮ್ಮ ಸೌಹಾರ್ದ-
ಮೆನಿತೊ !

ಇರಿಸಿದಿರ್ ಸೌಂದರ್ಯಸಾರಸರ್ವಸ್ವಮಂ
ತೆರದೆನ್ನ ಮುಂದೆ ನೀವ್ ! ಪೊರಗಣ್ಗೆ ನೀಮಿನ್ನು
ಮರೆಯಾದೊಡಂ ಹೃದಯಭಿತ್ತಿಯೊಳ್ ಚಿತ್ರಿತರ್ ! ನಿಮ್ಮನಾಂ
ಮರೆವುದೆಂತು ! ||೭||

**ಮಾರ್ಚ ೧೯೨೮**

## ೨೯ ರಾಮನಗುಳಿ

ಅರಿಯದು ಜನಂ ಶಾಂತಿ ಜೀವನದ ಸಾರಮೆಂ-
ದರಿಯದೈ ! ಇಲ್ಲಿ ದರಿಯಾಳದೊಳ್ ಪರಿವ ನಿ-
ರ್ಝರಿಣಿ ನಿಃಶಬ್ದತೆಯ ಮೃದುಮಧುರ ಸಂಗೀತದಿಂಪಿನೊಳ್
ಮೆಯ್ಮರೆದುದು !
ಸರಲತೆಯ ಮೂರ್ತಿ, ಸೆಳೆಗೊಂಬಿನೊಳ್ ಕುಳ್ಳಿರ್ದ
ಕಿರುಮೈಯ್ಯ ಹಕ್ಕಿ, ನಿನಗೆಂತು ಸಂತತಮಿಂತು
ಸುರುಚಿರಂ ಶಾಂತಿಸಂಗೀತಪೀಯೂಷಮಿದು ? ತಪಮಿರ್ದ ತವಸಿ
ನೀನ್ಯೆ ! ||೧||

ಎಲೆ ಮನಮೆ, ನೀನಂದಿನಿಂದಾವಗಂ ಬಯಸಿ-
ದೊಲವಿನೆಡೆಯಿದು ! ಜನದ ಕಲಹದಿಂ ನೊಂದು ವಿ- !
ಹ್ವಲಮಾಗಿ ಶಾಂತಿ ಬಂದಿಲ್ಲಿ ನೆಲಸಿದುದೇನೊ ನಿರ್ಜನಂ ಬನಮಿದೆಂದು ?
ಲಲಿತಮಿದು ! ತಡಿಯೆಡೆಯ ನೀಳ್ದ ಮರಗಳ್ ತಮ್ಮ
ನಿಲವನೇಂ ತಿಳಿನೀರ ಕನ್ನಡಿಯೊಳೀಕ್ಷಿಸುತೆ
ನಲವಾಂತು ಶಾಂತಾತ್ಮರಂತೆ ನಿಂತಿರ್ದಪುವೊ ! ಗಾಂಭೀರ್ಯಮೇಂ
ಮಧುರಮೋ ! ||೨||

ಜನದ ಸಂಮರ್ದದೊಳ್ ನೊಂದು ಬಸವಳಿದ ಜೀ-
ವನಕಲ್ತೆ ಈವಗೆಯ ಚೆಲ್ವು ಸಂಜೀವನಂ ?
ಕೊನರದೇ ಕಂದಿ ಕುಂದಿದ ಜೀವಲತೆಯಿಲ್ಲಿ ಪೂವಿಡಿದು ಸೊಂಪೆಸೆಯದೆ ?
ಮನಮಿಲ್ಲಿ ತಾಯ ಮೊಲೆವಾಲನುಂಬೆಳಮಗುವ-
ನನುಕರಿಪುದಚ್ಚರಿಯೆ ? ತೊಲಗೆನ್ನೈ, ಇಂತು ಚೆ-
ಲ್ವಿನಿದಾಗಿ ನಿಲೆ ಮುಂದೆ ! ತೊಲಗಲೀಯೆಡೆಯಿನೊಲ್ಲೆಂ ! ತಾಯೆ,
ತಾಯೆ, ತಾಯೇ !!! ||೩||

ಚಿತ್ರಸೃಷ್ಟಿ

ಇದು ಚೆಂದಮೆನ್ನ ತಾಯ್ನಾಡಿನದು, ಕರುನಾಡಿ–
ನದು ! ಶಾಂತಿನಿಲಯಕೀಚೆಲ್ವು ಸಾಜಂ ! ಸಾರು–
ವುದು ಕೇಳಿವೀಸೊಬಗು ಶುಚಿಗೆ ಶಾಂತಿಗೆ ಸೊಗಕೆ ಕರುನಾಡು
ಸದನಮೆಂದು !

ಎದೆ ಬಿರಿವುದೈ ! ಎನ್ನ ಕರುನಾಡದಿಂದಿನೀ–
ಕದನಂಗಳಿಂದೆ ಛಿನ್ನಾಂಗಮಾಯ್ತು ಕಟಕಟ !
ಒದವಿದುದು ನಿನ್ನವರೊಳವಿವೇಕಮೆಂತು ? ಪಾವನೆ, ತಾಯೆ,
ಪುಣ್ಯಭೂಮಿ ! ॥೪॥

ಇನಿತು ಸೊಬಗಿನ ಫಲಂ ಕಲಹಮೇನೈ ? ತಾಯ
ತನುವಿನಿಂದೊರೆವ ನೆತ್ತರ್ ಪೊನಲ್ವರಿವುದೈ !
ಅನುಚಿತಕೆ ಕೆಯ್ಯನಿಕ್ಕಿದೆವು ! ನಾಣಿಲಿಗಳಾದೆವು ! ಹಾಸ್ಯಕೆಡೆಯಾದೆವು
ನೆನೆವುದಿನ್ನೆಮಗೆ ಬಾಳಿದು ಸಲ್ಲದೆಂದು, ಸಾ–
ವಿನ ದಾಡೆಯಿಂದುಳಿವುದೆಂತೆಂಬುದಂ ಕಾಣ–
ಲನುವಾಗಲಿಂ ತಕ್ಕುದೆಂದು, ಮಾತ್ಸರ್ಯಾಗ್ನಿ
ಸರ್ವಸಂಹಾರಿಯೆಂದು ! ॥೫॥

ಕರುನಾಡಿನಂದಮಂ ವಿಕಟಮತಿಗಳ್ಗಲ್ತು
ವಿರಚಿಸಿದುದೀಶ್ವರಂ ! ನಿರ್ಮತ್ಸರರ್ಗೆ ಶುಚಿ–
ಚರಿತರ್ಗೆ ನಿರ್ಮಿತಂ ನಿರುಪಮಂ ಚೆಲ್ವಿಂತು ನಿರ್ಮಲಾನಂದದಾಯಿ !
ಪಿರಿದೆನ್ನ ತಾಯ್ನಾಡು ! ಪಿರಿದಿಂದು, ಪಿರಿದಂದು,
ಪಿರಿದಾವಗಂ ಮುಂದು ! ಕರುನಾಡು ಭಾರತದ
ಪಿರಿದುತ್ಸವೋಲ್ಲಾಸಭೂಮಿಯೆಂದೀಸೊಬಗು ಪೇಳ್ದಪುದು
ಕಬ್ಬಿಗಂಗೆ ! ॥೬॥

ಎಪ್ರಿಲ ೧೯೩೨

ಚಿತ್ರಸೃಷ್ಟಿ

# ಪರಿವಿಡಿ

ರವಿ ಕಾಣದುದನ್ನು ಕವಿ ಕಾಣುವನಂತೆ. ವಿಶ್ವದ ವಿವಿಧ ಸಂನಿವೇಶಗಳನ್ನು ಸಂಭಾವಿಸಬಲ್ಲ ಕವಿಯು ಮಾನವ ಪ್ರಪಂಚದ ಹಿರಿಮೆ–ಕಿರಿಮೆಯನ್ನೂ ನಲಿವು–ನೋವುಗಳನ್ನೂ ನಿರುಕಿಸಬಲ್ಲನು. ಕೂರಾದ ಆತನ ನೋಟವು ಎಲ್ಲೆಲ್ಲಿಯೂ ಅಲೆವುದು. ಭಾವನಾಪರವಾದ ಆತನ ಅಂತಃಕರಣವು ಅಲ್ಲಿ ಇಲ್ಲಿ ಸಹಾನುಭೂತಿಯಿಂದ ಮಾರ್ದನಿಗುಡುವುದು. ಕವಿಹೃದಯದ ಈ ಮಾರ್ದನಿಯೆ ಮಾತಿನ ಮೂರ್ತಿಯಾಗಿ ಮೂಡುವುದು.

“ಕವಿ, ಕವಿ, ಕವಿ! ಯಾರವನು? ಹೊತ್ತು ಹೊತ್ತಿನಲ್ಲಿ ಆವನಿಗಾಗಿ ಹೇಳುವ ಈ ಹಟವೇಕೆ?” ಎನ್ನುವಿರಾ? ಹಾಗಾದರೆ ಕೇಳಿ. ಕವಿಯೆಂಬವನು ಜ್ಞಾನಿ, ಲೋಕೋಪಕಾರಿ, ಮಹಾನುಭಾವ, ನಿರಂಕುಶಪ್ರತಿಭಾಚಕ್ರವರ್ತಿ. ಕವಿಯ ಹೃದಯವು ಉದಾತ್ತವಾದುದು; ಕವಿಯ ವಾಣಿ ಪ್ರಭಾವಯುತವಾದುದು. (೧ ಕವಿ)

ಕವಿ ಪ್ರಕೃತಿಬಾಂಧವನು. ನಿಸರ್ಗವು ಆತನ ಮಮತೆಯ ಬಳಗ. ಆತನ ಹಾಡಿಗೆ ಮೆಚ್ಚಿದ ಬನದೇವಿ ಅಮೃತತ್ವದ ವರದಿಂದ ಆತನನ್ನು ಗೌರವಿಸಿದಳು. (೨ ಕವಿ ಮತ್ತು ಬನದೇವಿ)

ಕನ್ನಡದ ಇಂದಿನ ಅವಸ್ಥೆ ಶೋಚನೀಯವಾಗಿದೆ. ಅದರ ಅಭ್ಯುದಯದ ಆಸೆಯನ್ನು ಸೂಚಿಸುವ ಸುಚಿಹ್ನವೇನಾದರೂ ಇದೆಯೆ? ಇದೆ. ಅಲ್ಲಿ ನೋಡಿ; ಆ ಹಾಳು ತೋಟದ ಮಾಮರದ ಕೊಂಬೆಯಲ್ಲಿ ಕುಳಿತು ಮಾಟದ ಕೋಗಿಲೆಯೊಂದು ಉಲಿಯುತಲಿದೆ! (೩ ಮುದ್ದಣ)

ಮೋಹದ ರಂಭೆ, ಚೆಲುವಿನ ಗೊಂಬೆಯಾಗಿ ಹೆಣ್ಣನ್ನು ಕಾಣುವುದು ವಿವೇಕವಲ್ಲ. ಸ್ತ್ರೀ ಸೃಷ್ಟಿಕರ್ತ್ರಿ, ಸೌಂದರ್ಯಮೂರ್ತಿ, ಶಾಂತಿದಾತ್ರಿ. ಸ್ತ್ರೀಶಕ್ತಿ ಅದ್ಭುತವಾದುದು. (೪ ಸ್ತ್ರೀಶಕ್ತಿ)

ಸಂಸಾರವೊಂದು ಅಡವಿ, ಕಟ್ಟಡವಿ. ಇಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚು. ಆ ಕಷ್ಟ–ಕ್ಲೇಶಗಳ ಕ್ರೂರತೆಯನ್ನು ಅನುಭವಿಸಿದವರೇ ಬಲ್ಲರು. ಇವುಗಳನ್ನು ಬದಿಗೊತ್ತಿ ಗುರಿಯತ್ತ ಸಾಗುವವನೇ ಧೀರ. (೫ ಅಡವಿ)

ಆಲದ ಮರದಡಿಯಲ್ಲಿ ಕುಳಿತು ಹಣ್ಣೆಲೆ ಉದುರುವುದನ್ನು ನೋಡಿ ಕವಿಗೆ ಸರ್ವಸಂಹಾರಿಯಾದ ಕಾಲನ ವಿಶ್ವರೂಪದರ್ಶನ ವಾಗುವುದು. (೬ ಆಲದ ಮರದಡಿಯಲ್ಲಿ)

ಜೀವನವೊಂದು ನೀರಗುಳ್ಳೆ; ಕಾಲಪ್ರವಾಹದಲ್ಲಿ ತೋರಿ ಸೇರಿ, ತೇಲಿ, ನಲಿದು ಮಾಯವಾಗುವುದು. (೭ ನೀರಗುಳ್ಳೆ)

ಸಂಗೀತವು ಸಂತಾಪವನ್ನು ಅಳಿಯಿಸುವುದು. (೮ ಸಂಗೀತ)

ಮಲವನ್ನು ತೊಳೆದು ಮನಸ್ಸನ್ನು ಮೇಲು ಮಟ್ಟಕ್ಕೆ ಏರಿಸಿ, ಬಾಳನ್ನು ಇನಿದಾಗಿಸುವ ನಯವು ಇಂಪಾದ ಹಾಡಿನಲ್ಲಿ ಇದೆ. (೯ ಇಂಚರ)

ಸಂಗೀತವು ಅನುಪಮವಾದ ಕಲೆ. ಈ ಅಚೇತನ ವೀಣೆ ಎನಿತು ಅದ್ಭುತ ನಾದಪ್ರಪಂಚವನ್ನು ಸೃಜಿಸುವುದು !

(೧೦ ವೀಣೆಯ ತಂತಿ)

ಕವಿಯ ಮೂಕ ಕವನಗಳು ಸಂಗೀತದ ಚೆಲುವಿನಿಂದ ಚೆಲುವು ಗೊಳ್ಳುವುವು. (೧೧ ಸಂಗೀತದ ಚೆಲ್ವು)

ಪವಿತ್ರ ಹೃದಯದಿಂದ ಭಕ್ತಿಪರವಶಳಾಗಿ ಕವಿಯ ಧರ್ಮ ಪತ್ನಿಯು ಒಂದು ಹಾಡನ್ನು ಹಾಡುತಿದ್ದಳು. ಅದರ ಸೊಂಪು ಕವಿಯ ಅಂತಃಕರಣದಲ್ಲಿ ನೆಲೆಯಾಗಿ ನಿಂತು ಕವನವಾಗಿ ಹೊರ ಹೊಮ್ಮಿತು. (೧೨ ಒಂದು ಹಾಡು)

ಮನುಷ್ಯರ ಮಾತೇನು ? ಪಶುಪಕ್ಷಿಗಳಿಗೂ ಭಾವನೆಯುಂಟು. ಭಾವನೆಯಿಂದ ಬಗೆದುಂಬಿ ಒಂದು ಹಕ್ಕಿ ಹಾಡಿತು. (೧೩ ಶೀತಿ)

ಪ್ರೀತಿಯಿಂದ ಕಟ್ಟಿದ ಬುತ್ತಿ ಅಮೃತದಂತೆ ಸವಿ.

(೧೪ ಬುತ್ತಿ)

ಮಲಗಿದ ಕೂಸು ಕುಲುಕುಲು ನಗುವುದು; ಏತಕ್ಕೋಸುಗ?

(೧೫ ಮಳ್ಳಿ)

ಬಾಳಿನ ಕಾಡಿನಲ್ಲಿ ಬಡತನದ ಕಿಚ್ಚು ಹಾವಳಿಯಿಕ್ಕುತಲಿದೆ. ಇದರಲ್ಲಿ ಜೀವಿಯು ಬದುಕಿ ಬೆಳೆಯುವ ಬಗೆ ಯಾವುದು ?

(೧೬ ಬಡತನದ ಬೇಗೆ)

ಚಿತ್ರಸೃಷ್ಟಿ

ನಿರ್ಗತಿಕರ ಪಾಡು ನಾಯಿಗೂ ಬೇಡ. ಕುರುಡ ಮುದುಕನೊಬ್ಬನು ಮಳೆಯಲ್ಲಿ ಕಂಗೆಟ್ಟು ಹಾದಿತಪ್ಪಿ ಸೆಳವಿಗೆ ಬಿದ್ದು ಹರಿದು ಹೋದನು. ಆತನಿಗಾಗಿ ' ಅಯ್ಯೋ ' ಅನ್ನುವವರಾರು ?

(೧೭ ಮಳೆ ಬೀಳುತಲಿತ್ತು)

ಇಂತಹ ಅನ್ಯಾಯಗಳು ಮನುಷ್ಯರ ರಾಜ್ಯದಲ್ಲಿಯಷ್ಟೇ ನಡೆಯುತ್ತ ಇಲ್ಲ. ದೇವನ ರಾಜ್ಯದಲ್ಲಿಯೂ ನಡೆಯುವುವು. ಮಳೆಗಾಲವಿದ್ದೂ ಮಳೆಯಿಲ್ಲದುದಕೆ ಹೌಹಾರಿ ಕುಳಿತ ಒಕ್ಕಲಿಗನನ್ನು ನೋಡಿರಿ. (೧೮ ಏಂ ನ್ಯಾಯವೋ ?)

ಹೆರವರನ್ನು ಹೆದರಿಸುವುದೂ ಒಂದು ಹೆಚ್ಚಳವೆ !

(೧೯ ಹೆದರಿದುವು)

ಧರ್ಮ, ನೀತಿ, ಸಂಸ್ಕೃತಿ, ಮುಂತಾದ ದೊಡ್ಡ ದೊಡ್ಡ ಮಾತುಗಳನ್ನು ಬಡಬಡಿಸುವ ಮಾನವ ಸಮಾಜದಲ್ಲಿ ಕೊಳೆ ಹೆಚ್ಚಾಗಿದೆ. ದಂಭ, ಮದ, ಮತ್ಸರಗಳು ಎಲ್ಲೆಲ್ಲಿಯೂ ತಾಂಡವವಾಡುತಿರುವುವು. ಇದರಿಂದ ಮನುಷ್ಯತ್ವವೇ ಹಾಳಾಗುತಿರುವುದು. ಜೋಕೆ!

(೨೦ ಎಚ್ಚರು)

ಅಬ್ಬ ! ಎಷ್ಟಪ್ಪ ಸೊಕ್ಕು ಈ ಹುಲ್ಲು ಹುಳುಗಳಿಗೆ ? ಇವುಗಳ ಕುತಂತ್ರದ ಗತಿ ನೋಡಾ ! (೨೧ ಹುಳುಗಳು)

ದೇವತನದಿಂದ ದೂರ ಹೋಗಿ ಮಾನವತನವನ್ನು ಮಣ್ಣುಗೂಡಿಸಿದ ಈ ಮೃಗಗಳ ಗಾಯಗಳನ್ನು ಮಾಯಿಸಲು ಆಯಾಸಪಡುತಿರುವವನು ಸಾಧು. ಇದರ ಅರಿವಾದರೂ ಈ ಮನುಷ್ಯರೆನಿಸಿಕೊಳ್ಳುವವರಿಗೆ ಇರಬಾರದೆ ? (೨೨ ಸಾಧು)

ಶುದ್ಧ ಹೃದಯದಿಂದ ನೋಡುವವನಿಗೆ ಲೋಕದಲ್ಲಿ ಎಲ್ಲೆಲ್ಲಿಯೂ ಶಾಂತಿ ಸೌಂದರ್ಯ ಆನಂದಗಳ ಸಾಮ್ರಾಜ್ಯವು ಕಂಗೊಳಿಸುವುದು. (೨೩ ಮನಃಪಾವಿತ್ರ್ಯ)

ಮನಸ್ಸಿನ ನೈರ್ಮಲ್ಯದಿಂದ ಬಾಳಿಗೆ ಚೆಲುವು; ಜೀವನಕ್ಕೆ ಶಾಂತಿ, ಪುಷ್ಟಿ, ತುಷ್ಟಿ. (೨೪ ನೈರ್ಮಲ್ಯ)

ಚಿತ್ರಸೃಷ್ಟಿ

## ೧ ಕವಿ

ಪರಿಮಳದೆ ಪುದಿದು ಬಲ್ಲನೆಯಲರ್ದು ಬಗೆಗೊಳ್ವ
ನರುಗಂಪಸೆತ್ತಲುಂ ಸೂಸಿ ಕೃತಿಯಾದವೋಲ್
ಪರಿಪಕ್ವಮತಿಯುದಾತ್ತಾಶಯಂ ಕವಿ ಸುಜನವೊಲ್ದೊಲ್ದು
ನಲಿಯೆ ಪಾಡಿ
ಸರಸಾರ್ಥ-ಸುಭಗ-ವಿಮಲೋದಾರ-ಭಾವ-ಬಂ–
ಧುರಸೂಕ್ತಿ ಜನಮನದ ಕಳ್ತಲೆಯನಲೆದಟ್ಟಿ
ಮೆರೆಯೆ, ಮೆರೆವಂ ಬೆಳಗಿ ಲೋಕಮಂ ಸುಕೃತಿಶರ–
ದಮೃತಾಂಶುವಿಶದ ಕೀರ್ತಿ ||೧||

ಅನುಕಂಪನಂ ಸಹಜಗುಣಮಿವನದೈ ! ನಲಿವ
ಜನದ ನಲ್ಲಿವನ ಹೃದ್ವಲ್ಲಕಿಯ ತಂತ್ರಿಯೊಳ್
ಸ್ವನಮನೊದವಿಸದೆ ? ಜನದಳಲಿವನನಳಲಿಸದೆ ಹೃದಯಂ ಬಿರಿಯೆ ತಾಗಿ?
ತನಗೆ ಸೊಗಮಾದೊಡನೆ ತಾಯಂತೆ ಮಕ್ಕಳ್ಗೆ
ಮನವೊಲ್ದು ಪಸುಗೆಗುಡುವಂ ಜನಕೆ ! ಜಗಮಿವನ
ತನುವದರ ಪದುಳಮುದರಳಲೆರಡುಮುಪ್ಪುವೀತನವೆಂದೊಡಲ್ತಚ್ಚರಿ ||೨||

ಕವಿ ತತ್ತ್ವದರ್ಶಿ, ಸಮದೃಷ್ಟಿ, ಸಮ್ಯಗ್‌ದೃಷ್ಟಿ,
ಕವಿ ಕಠೋರಂ ವಜ್ರದಂತೆ, ಸುಮದಂತೆ ಮೃದು
ಕವಿ ನಿರಂಕುಶನಲಮಾದೊಡಂ ಕವಿಗೆ ಪೆರರಂಕುಶಮಿಡಲ್ಕಾರರ್ಥೈ !
ಕವಿ ನಿತ್ಯಸೌಂದರ್ಯಭೋಕ್ತಾರನಾತನದು
ನವನವೋನ್ಮೇಷಪ್ರಭಾವಿ ಮತಿಯುಪ್ಪುದ–
ರ್ಣವದಲಂಪೆಂತಂತು ! ಕವಿಯಶಂ ಸುರಪತಿಪ್ರಾರ್ಥ್ಯಮೆಂಬುದು
ಸತ್ಯಮೈ ||೩||

೨೨ ಅಕ್ಟೋಬರ ೧೯೩೬

ಚಿತ್ರಸೃಷ್ಟಿ

## ೨ ಕವಿ ಮತ್ತು ಬನದೇವಿ

ಹೊಳೆಯ ತಡಿ, ಹೊಂಬಿದಿರ
ಮೆಳೆ, ಹಕ್ಕಿಗಳ ಬಳಗ;
ಮಳಲಿನಲಿ ಕವಿ ಬಂದು
ಕುಳಿತನಾಬೆಳಗಿನಲಿ ||೧||

ಹಾಡಿದನು ಕವಿ; ಅದನೆ
ಹಾಡಿದುದು ಹೊಳೆನೀರು,
ಹಾಡಿದುದು ಬಿದಿರ ಮೆಳೆ,
ಹಾಡಿದುವು ಹಕ್ಕಿಗಳು! ||೨||

**ಚಿತ್ರಸೃಷ್ಟಿ**

ಬಿರಿವ ಹೂವಿನ ಬಳಿಯ
ಮರಿದುಂಬಿ ಕೇಳ್ದು ಮೆಯ್-
ಮರೆದುದಾಹಾಡಿನಲಿ
ಮೊರೆದುದಿಂಚರದಿಂದೆ! ||೩||

ಇನಿದು ದನಿ ತುಂಬಿದುದು
ವನದೊಳೆಡೆಯೆಡೆಯಲ್ಲಿ!
ಬನದೇವಿ ಹರ್ಷಾಶ್ರು
ಹೊನಲಿಡಲು ನಲಿದಳು! ||೪||

ಬನದೇವಿ, "ಶಾಂತಿಗೀ-
ತನೆ ಉಗಮುದೆಡೆಯಲ್ತೆ?"
ಎನುತೆ ಕೆಯ್ಮುಗಿದಳಾ-
ತನಿಗೆ ಮನದೊಲವಿಂದೆ! ||೫||

"ಅಮೃತವಾಕ್ ಅಮರ ಕವಿ
ವಿಮಲಾತ್ಮ, ಸತ್ಯಾರ್ಥಿ
ಶಮನಿಲಯನೇ!" ಎಂದು
ನಮಿಸಿದಳು ಬನದೇವಿ! ||೬||

೨೯ ಅಕ್ಟೋಬರ ೧೯೩೯

## ೩ ಮುದ್ದಣ

ನಡುವಗಲ ನೇಸರಿನ ದಳ್ಳಿಸುವ ಕಾಯ್ಪಿನಿಂ
ಕಡುನೊಂದು ನೀರಡಿಸಿ ಬಾಯಾರಿ ನಿಟ್ಟುಸಿರ-
ನಡಿಗಡಿಗೆ ಬಿಡುಬಿಡುತೆ ಬಸವಳಿದು ಬಲಗುಂದಿ ಕಾಲ್ಗೆಟ್ಟು
ಪೋಪೆಡೆಯೊಳು ||
ನಿಡುಮರನನೊಂದನಾನಿದಿರಲ್ಲಿ ಕಾಣುತುಂ
ಕಡುಸಂತಸಂದಾಳ್ದು ಮೆಲ್ಲಡೆಯೊಳದರ ನೆಳ-
ಲಡಿಯ ನುಣ್ಮಳಲೊಟ್ಟಿಲಂ ಪೊರ್ದಿ ದಣಿವಾರಿಸಲ್ಕೆಂದು ನಿಂದೆನಲ್ಲಿ ||೧||

ನೆಳಲೊಳಿರೆ ನಾನಿಂತು, ನರುದಂಬುಲಂ ಮೆಲ್ದು
ಬಳಿಯೊಳಿರ್ಪೆಳವೆಣ್ಣ ಸುಯ್ಯೆಲರನನುಕರಿಸಿ-
ದೆಳಗಾಳಿ ಸುಳಿದುದೊಯ್ಯನೆ; ತಿಳಿಯಲೆಳ್ದೆನಾನೆತ್ತಣಿಂ ಬಂದುದೆಂದು;
ಅಳಿವಿಂಡು ಮೊರೆಯುತುಂ ಪೋಪುದಂ ಕಂಡು ಬೆಂ-
ಬಳಿವಿಡಿದು ನಾಲ್ವೆಜ್ಜೆ ಮುಂಬರಿದೆನೊಡನೆ ಕ-
ಣ್ಣಳತೆಯೊಳ್ ಬಂದುದೊಂದುಪವನಂ ತವಕದಿಂ
ನೋಡಲದನೊಳಸಾರ್ದೆನು ||೨||

ಬೆರಗಾದೆನಳ್ಕಿದೆಂ ಮಿಡುಕಿದೆಂ ಮಮ್ಮಲಂ
ಮರುಗಿದೆಂ ಕರೆಯುತುಂ ಕಂಬನಿಯನಾತೋಂಟ-
ದಿರವನಾಂ ಕಂಡು, ಹಾ ದೈವ ನಿಷ್ಕರುಣೆ, ನೀನೇಂಗೈದೆಯೆನುತೆ
ನೊಂದು !
ಮುರುಟಿಹುದು ಪೂವಳ್ಳಿ, ಸುರುಟಿಹುದು ಪಣ್ಮರಂ,
ಬರಿದಿಹುದು ನೀರ್ಗೊಳಂ, ಜರಿದಿಹುದು ಬಳ್ಳಿವನೆ !
ಹರ ಹರಾ ! ಪಣ್ಣಿಲ್ಲ, ಕಾಯಿಲ್ಲ, ಪೂವಿಲ್ಲ, ನನೆಯಿಲ್ಲ, ತಳಿರಿಲ್ಲಲಾ! ||೩||

ಚಿತ್ರಸೃಷ್ಟಿ

ಇರೆ ತೋಂಟದಿರವಿಂತು, ತೆಂಕಣೆಡೆಯಲ್ಲಿ ನಸು–
ವಿರಿದ ನರುವೂಗಳಿಂದೊಡಲಿಚನ ಪೂಣ್ಬುಗಳ
ಪಿರಿದಾದ ಮನೆಯಂತೆ ಕಣ್ಗೆಡ್ಡಮಾಗಿ ಮಾಮರನೊಂದು ಬೆಳೆದುದದರ
ಬಿರಿವೂಗಳನಿಗಂಪಿಗವ್ವಳಿಸಿ ಗಾವರಿಪ
ಮರಿದುಂಬಿಗಳ ಮನಂಗೊಳಿಪ ನುಣ್ಚರದಿಂದೆ
ಪಿರಿದಾಯಸಂ ಜಾರೆ, ಮನದಳಲ್ ಮರೆಯಾಗೆ, ನಲವಾಂತು
ನಿಂತೆನಲ್ಲಿ ||೪||

ನಿರುಕಿಸುತೆ ನಿಂತೆನಾಂ ಪಾಳ್ನೆಲದೊಳಲರಿಡಿದು
ನೆರೆಮೆರೆವಲಂಪಿನಿಂ ಪೊರೆದು ಕಂಗೊಳಿಪ ಮಾ–
ಮರದಿರವಿದೆಂತೆಂದು ಬಗೆಯೊಳಚ್ಚರಿಗೊಳುತೆ; ಚೆಂದಳಿರ ತೊಂಗಲಲ್ಲಿ
ಕಿರುಮೆಯ್ಯ ಚೆಲ್ವ ಕೋಗಿಲೆಯೊಂದು ನಿಂದು ನಲ್–
ಸರದಿಂದೆ ಮೂರುಸೂಳ್ ಶ್ರೀರಾಮ ಎಂದುಲಿದೊ–
ಡರಚಣದೊಳಾ ತೋಂಟದೆಡೆಯೆಡೆಯ ಗಿಡುಬಳ್ಳಿ ತಳಿರಿಡಿದು
ಸೊಂಪೆಸೆದುದು ||೫||

ಎಳಗಾಳಿ ತೀಡಿದುದು ನಲಿದು, ನಲ್ಪೊಗರ ಪುಲ್
ಬೆಳೆದುದಲ್ಲಲ್ಲಿ ಬಗೆವಗೆಯ ಬಣ್ಣಂಗಳಿಂ
ತಳತಳಿಪ ಕಂಪುಗುವ ಪೂಗಳಿಂ ಪರಿವಡೆದು ಬಳ್ಳಿಗಳ್
ಸೊಗಯಿಸಿದುವು
ತಿಳಿನೀರ್ಗಳಿಂ ಕೊಳಂ ತೀವಿದತ್ತೆಳಅಂಚೆ–
ಗಳ ಪಿಂಡು ಮುದದಿನೋಲಾಡಿದುದು ! ಕೋಗಿಲೆಗೆ,
"ಕಳರುತಿಯ ಪಕ್ಷಿ, ನೀನಾರೆಂದು ಪೇಳ್ವುದೆ" ನೆ, ಮುದ್ದಣ್ಣ
ಎಂದುಲಿದುದು ||೬||

# ೪ ಸ್ತ್ರೀ ಶಕ್ತಿ

ಸ್ತ್ರೀ ! ನೀನು ಪುರುಷನುಗ್ರತೆಯನಳಿಯಿಪ ಶಕ್ತಿ !
ನೀನಧಿಷ್ಠಾತ್ರಿಯಹೆ ಶಾಂತಿಸಾಮ್ರಾಜ್ಯಕ್ಕೆ !
ನೀನಿರುವೆಯೌ ಪ್ರೇಮಸುಧೆಯನುಣಿಸುವ ತಾಯಿ !
ನೀನು ಶೃಂಗಾರದಾಟದ ಗೊಂಬೆಯಲ್ತಲ್ತು !
ನಿನ್ನ ನೈಜವನರಿಯದವದಶೆಗೆ ಗುರಿಯಹರು
ಕುನ್ನಿಗಳು ! ನಿನ್ನ ಮೈಮೆಯನರಿತ ಮಾನವರು
ಮಾನವಶ್ರೇಷ್ಠರೆನಿಸಿದರು, ದೇವೀ ! ಭವಕೆ
ನೀನೆ ಚೆಲ್ವೊದವಿಸಿದೆ, ನೀನೆ ನಲ್ವೊದವಿಸಿದೆ;
ಭಗಿನಿ, ನೀನೋಂ ಸ್ವಸ್ತಿ ಎಂದೊಲಿದು ನುಡಿದೆಯೌ
ಜಗದ ಜೀವಕೆ ! ಪುರುಷನದನು ಕಡೆಗಣ್ಚಿದನು,
ಶಾರೀರಬಲದ ಮದದಿಂದುಬ್ಬಿ ಭೋಗಕ್ಕೆ
ಮಾರಿದನು ಹತಭಾಗ್ಯನೀಜಗದ ಶಾಂತಿಯನು !

ಅಕಲಿತಾಂತಃಶಕ್ತಿ ! ನಿನ್ನದಾಶಕ್ತಿಯನು
ಪ್ರಕಟಿಸೌ, ಸ್ತ್ರೀ, ಕಾಯಿ ಕುಸಿಯುತಿಹ ವಿಶ್ವವನು !

೨೩ ನವೆಂಬರ ೧೯೩೬

## ೬ ಆಲದ ಮರದಡಿಯಲ್ಲಿ

ತರಗೆಲೆಗಳ ನಲ್ಪಾಸಿಳೆಯೊಳ್ ಕು-
ಳ್ಳಿರಲೆಳವಳಿರ ವಿತಾನಂ ಮೇಲಿಂ-
ಚರದಿಂ ಪಾಡುತೆ ಸೆಳೆಗೊಂಬುಗಳೊಳ್ ಕುಣಿಕುಣಿವೆಳಗಾಳಿ;
ತೆರತೆರದ ವಿಹಂಗಂಗಳ ನುಣ್ದನಿ;
ಸುರುಚಿರಮೀಯೆಡೆ! ಮನಮೆಳಸುವುದಿ-
ಲ್ಲಿರಲೀಶಾಂತಿಯ ಸದನದೊಳೆನಿತೀಮರದಡಿ ಸೊಗಸಿನದೋ! ||೧||

ಸಡಿಲೆ ಬಿಸುಗೆಯಲರಲೆಪಕೆ ಪಣ್ಣೆಲೆ
ಗಿಡದಿಂ ಪಳಪಳನೇನುದಿರ್ದಪುವೋ!
ಪೊಡವಿಯಿನೊಗೆದೊಡವೊಗಳೆಂತಿರ್ದೊಡಮೊಂದಿರ್ದೊಡಮಿಂತು
ಪೊಡವಿಯ ಮಡಿಲೊಳ್ ಕೊನೆಗೊಂದುದಿನಂ
ಪುಡಿಗೂಡುತುಮೆಡೆಮಾಡುವುವೈ ಪೊಸ-
ಒಡವೊಗೆ! ಮೃತಿ ನವಜೀವನಕೆಡೆಯೀವುದದೆನಿತಚ್ಚರಿಯೋ! ||೨||

ಉದುರ್ವುವು ಪಣ್ಣೆಲೆಗಳೊ ಕಾಲವಿಹಂ-
ಗದೆರೆಂಕೆಯ ಪಳದುಪ್ಪುಳ್ಗಳೊ? ಈ
ಪೊದರಿಂದುಗುವುದು ಗಾಳಿಯ ದನಿಯೋ, ಕಾಲಖಗದ ಕೂಗೋ?
ಉದಯಿಪ ನೇಸರ ಪೊಂಬಿಸಿಲಿಂದೆಸೆ-
ವುದು ಪಲ್ಲವನಿಕರವೊ ಕಾಲಶಕುಂ-
ತದ ಪೊಸದುಪ್ಪುಳ ಬಂಬಲೊ? ಜಗಮಿದು ಕಾಲನ ರೂಪು ಗಡಾ! ||೩||

೨೩ ಡಿಸೆಂಬರ ೧೯೨೯

## ೭ ನೀರ ಗುಳ್ಳೆ

ನೀರ ಗುಳ್ಳೆ ! ನೀರ ಗುಳ್ಳೆ !
ನೀರ ಮೇಲೆ ತೇಲುತಿಹುದು

ಒಂದು ಮೂರು ನಾಲ್ಕು ಹತ್ತು
ಬಂದು ದೊಡ್ಡ ಗುಳ್ಳೆಯೆಡೆಗೆ
ತಂದೆಯತ್ತ ಮಕ್ಕಳಂತೆ
ಚೆಂದವಾಗಿ ಸಾಗುತಿಹುವು ||೧||

ಓಡುತೋಡುತೊಂದನೊಂದು
ಕೂಡುತೇಳು ಬಣ್ಣಗಳನು
ಮಾಡಿ ತೋರುತಿಹುವು, ಮತ್ತೆ
ಆಡಿ ಆಡಿ ನಲಿಯುತಿಹುವು ||೨||

ನೀರೊಳಾಗಿ ನೀರೊಳಲೆದು
ನೀರೊಳಡಗಿ ಹೋಯ್ತುದೆತ್ತೊ !
ತೋರದದರ ಗುರುತು ! ಗುಳ್ಳೆ
ದೂರ ದೂರ ದೂರ ಹೋಯ್ತು ! ||೩||

ದೇವನೊಡಲೊಳಿಂತು ಜಗದ
ಜೀವರಾಶಿ ತೋರಿ ಮತ್ತೆ
ದೇವನಲ್ಲಿ ಸೇರುತಿಹುವು !
ಸಾವು ಸುಳ್ಳು ಸುಳ್ಳಲೇ ! ||೪||

ಅಕ್ಟೋಬರ ೧೯೩೧

ಚಿತ್ರಸೃಷ್ಟಿ

## ೮ ಸಂಗೀತ

ಮುಗಿಲಿಂದಮವಿರತಂ ಸುರಿವ ಪಾಲ್ಸರಿಯಿದೆನೆ
ಬಗೆಗೊಳಿಪ ಬೆಳ್ದಿಂಗಳುಜ್ಜ್ವಳಿಕೆಯೊಳ್ ಪುದಿದು
ಮಗಮಗಿಪ ಪೊಸಗಂಪಿನೊಳ್ ಬೆರೆದು ಮೆಲ್ಲೆಲರಲಂಪಿನೊಳಗೊಂದು
ಗೂಡಿ
ಸೊಗಯಿಸುವ ಸಂಗೀತದಿಂಪಿನಿಂ ಮನದಳಲ
ಬಿಗಿಬಿಗಿಪು ಸಡಿಲುತೋಸರಿಸುತಿರೆ, ನಲ್ಸೊಗಂ
ಚಿಗುರೊಡೆದು ರಯ್ಯದಿಂ ಪರ್ವಿದತ್ತಮಮ ! ಪೆಂಪೆಂತುಟೋ
ಸಂಗೀತದಾ ! ॥೧॥

ಮಾರ್ಚ ೧೯೨೭

ಚಿತ್ರಸೃಷ್ಟಿ

# ೯ ಇಂಚರ

ಇದು ಕಿವಿಗೆ ಸೊದೆ! ಮನಕೆ ಸಂತರ್ಪಣಂ! ಪೇಳ
ಇದು ನಿನಗೆ ಸಮನಿಸಿಮದೆಂತಮ್ಮ? ನೋಂಪಿಯಾ-
ವುದನೆಸಗಿ ಪಡೆದೆಯೀಸವಿಗೊರಲನೆನಿತೊಂದು ಮೋಹನವೊ
ಈ ದನಿಯೊಳು!
ಮುದಮಿಲ್ಲಿ, ಮುದಮಲ್ಲಿ, ಮುದಮೆತ್ತಲುಂ ನಾದ-
ಮಿದು ತುಂಬಿದೆಡೆಯಲ್ಲಿ! ಸವಸುಮಂಗಳ ಮೆಲ್ಪು,
ಮೃದುಸಮೀರದ ತಣ್ಪು, ಬೆಳ್ದಿಂಗಳೊಳ್ಪಿಲ್ಲಿ ಸೊಗಸಾಗೆ ಕೂಡಿದಪುವು! ||೧||

ಬಗೆಯುಂಚೆಯಿಂಚರದ ತಿಳಿಗೊಳದ ತೆರೆಗಳೊಳ್
ಪುಗುತಂದು ತಲ್ಲೀನಮಾದಪುದು! ಸಂಸೃತಿಯ
ಬಿಗಿಪು ಸಡಿಲಾದಪುದು! ಸಂತತಮೊಳಿಂತಿರಲ್ವೇಕಲೇ! ಹಾಡು, ತಾಯೆ!
ಭಗವಂತ, ನೀನಿಂತು ತಿಳಿಗಣ್ಗೆ ತೋರ್ದಪಯ್
ಬಗೆವಗೆಯ ಸೊಂಪಿನೊಳ್! ನೀನಲ್ಲದೊದವುವುದೆ
ಸೊಗಮಿನಿತು ನಿರ್ಮಳಂ? ಮುಗಿಸದಿರ್, ಮುಗಿಸದಿರು, ಹಾಡಮ್ಮ!
ಹಾಡು, ಹಾಡು! ||೨||

ತಂಗಿ, ನೀಂ ತಣಿಸಿದೌ ಗೀತದಿಂದೆನ್ನಂತ-
ರಂಗಮಂ! ನಿನ್ನನಾನೇನೆಂದು ಪರಸುವೆಂ?
ಹೆಂಗುಸಿಗೆ ಕೂರ್ಪ ನಲ್ಲನೆ ಸಕಲ ಸಂಪತ್ತು! ಪೂರ್ವಕೃತ ಸುಕೃತದಿಂದೆ
ತಂಗದಿರನಂ ಪೋಲ್ವ ಮೃದುಲಸ್ವಭಾವನಂ
ನೀಂ ಗಡಾ ಪಡೆದೆಯೌ ಇನಿಯನಂ! ನಿನಗಿನ್ನು
ಮಂಗಳೆಯು, "ಈಪ್ಸಿತಂ ಸಂಪ್ರಾಪ್ತಮಸ್ತುತೇ!" ಎಂಬುದೇ
ಎನ್ನ ಪರಕೆ! ||೩||

ಜನವರಿ ೧೯೩೮

## ೧೦ ವೀಣೆಯ ತಂತಿ

ಇನಿದಿನಿದು ನಿನ್ನ ದೀಗೀತಮೆಲೆ ತಂತಿ! ಪೇಳ್
ನಿನಗೆಂತು ಸಂತಸಂ? "ಗುರುಕರಾಂಗುಲಿ ಸೋಂಕೆ
ನನಗಾದುದಾನಂದಮಿಂತೆಂ"ದು ನೀನೆಂಬೆಯಾ? ತಂತಿ, ಸುಕೃತಿ ನೀನೈ!

ಎನಿತು ಗುರುಕೃಪೆಯ ಪೆಂಪಿದು! ಜಡದೊಳಾಯ್ತು ಚೇ-
ತನಮಿಂತು, ದಿವ್ಯಸಂಸ್ಕೃತಿಯ ಗಾಂಭೀರ್ಯ ಮಿಂ-
ತನುಪಮಾನಂದದನುಭೂತಿಯಿಂತಮೃತನಿಷ್ಯಂದಿ
ಮೃದುನಿನದಮಿಂತು! ||೧||

೪ ದಿಶೆಂಬರ ೧೯೩೯

# ೧೧ ಸಂಗೀತದ ಚೆಲ್ವು

ಹೃದಯವುಕ್ಕುವುದು ! ಸಂಗೀತದೀಯಿಂಪು ಸಂ-
ಮುದವನೇಂ ಕರೆದಪುದೊ ! ತಂಗಿ, ಕಿನ್ನರಕಂಠಿ !
ಬದುಕು ಸಂಗೀತದಿಂ ಚೆಲ್ವೆಂದು ಸಾರುವುದು ನಿನ್ನ ಕೊರಲಿಂಚರಮಿದು !

ಮೃದುಭಾವಕುಸುಮಂಗಳಿಂ ಮೂಕಕವಿ ವಿರಚಿ-
ಸಿದನೊಂದು ಪದ್ಯಮಂ ! ಮನವೊಲ್ದು ಕವಿ ಸವಿದ-
ನದರ ಚೆಲ್ವಂ ಗಡಾ ನಿನ್ನ ಕೊರಲಿಂಪದರ ಪೂರ್ವಕೆ
ಮಿರುಗಾಗಿರೆ ! ||೧||

೨೫ ಅಕ್ಟೋಬರ ೧೯೩೯

## ೧೨ ಒಂದು ಹಾಡು

ಅರೆವಿರಿದಲರೆಡೆಯೊಳ್ ನಲ್ಲಳ್ ಮನ–
ದೆರಕದೆ ನೋಡುತೆ ಸೃಷ್ಟಿಯ ಸೊಬಗಿನ
ವಿರಚನೆಯಂದಮನಚ್ಚರಿಯಿಂದಂ ಕಣ್ದಾವರೆಯರಳೆ
ಕಿರುನಗೆ ನಲ್ಮೊಗಮಂ ಸೂಚಿಸೆ ಮೆ
ಯ್ಮರೆತೇಂ ನಿಂತಿರ್ಪಳೊ ನೈರ್ಮಲ್ಯದ
ಸುರುಚಿರಮೂರ್ತಿ ! ಅದೇನೀಕೆಯ ಸೌಂದರ್ಯದುಪಾಸನೆಯೊ ! ||೧||

ಇದು ಸೌಂದರ್ಯಾಂಬುಧಿಯ ತರಂಗದ
ಮೃದು ! ಮಧು ನಿನದಂ ನಲ್ಲಳ ಸಂಗೀ–
ತದ ಮೆಲ್ಲುಲಿಯಿಂಪೆನಿತೋ ! ಪಾವಿತ್ರ್ಯದ ಮೇಲ್ಮೆಯಿದೆನಿತೋ !
ಇದು ಪರಸುಖಕುಸುಮೋದ್ಯಾನದ ಸಂ–
ಪದಮಿದುರನುಪಮಸೌರಭದೊಳ್ ನಲಿ-
ವುದು ನಲಿವುದು ಬಗೆದುಂಬಿ ! ಅದೇಂ ಪೆಂಪೋ ಸತ್ಸನ್ನಿಧಿಯಾ ! ||೨||

ಅಕ್ಟೋಬರ ೧೯೨೭

## ೧೩ ತೀತಿ

ಎನಿತಿನಿದೊ, ನೀರ್ವಕ್ಕಿ, ನಿನ್ನಿನಿಯುಳಂ ಕರೆವ
ದನಿ ! ಕೂಗು ಕೂಗೆಲ್ಲೆ, "ತೀತಿ ! ತೀತೀ ! ತೀತಿ !"
ನಿನಗಾವ ಪೆಸರೆಂಬುದಂ ಪೇಳ. ಪೆಸರೆನಗೆ 'ತೀತಿ' ಯೆಂದೆಂಜೆಯೇನ್ಸೈ ?
ಒನಪೆನಿತೊ ? ಒಯ್ಯಾರಮೆನಿತೊ ? ತೀತೀ ತೀತಿ,
ಅನುರಾಗಸುಧೆಯ ನೇ ಕರೆದಪ್ಪೆ ! ತೀತಿ, ನಿ-
ನ್ನಿನಿಯುಳೀತಳಿರ್ಗಳೊಳ್ ಮೆಯ್ಗರೆದು ಸುಧೆಯನೀಂಟುತುಮವೇಂ
ಮೆಯ್ಮರೆದಳೋ ! ||೧||
ಇದು ಮನೋಮೋಹನಂ, ಶ್ರುತಿರಸಾಯನಮಲೇ !
ಇದರಿಂದಮೀಯೆಡೆಯ ಶಾಂತಿಯೆನಿತಿನಿದಾಯ್ತೊ !
ಇದರಿಂದೆ ಶಾಂತಿಯಿನಿದಾದುದೋ ? ಇದು ಶಾಂತಿಯಿಂದಿನಿದೊ ?
ಪೇಳ್ವರಾರೋ ?
ಇದು ಪರಮಮಂಗಲಂ ಸುತ್ತಲಿನ ದೃಶ್ಯಮಂ-
ಬುದಮಾಲೆ ಪವನಸಂಚೋದಿತಮದೇಂ ಕದ-
ಕ್ಕದಿಸುವುದೊ ! ಎಳವುಲ್ಲ ಪಸಿರಿಂದೆ ಮಳೆನೀರ್ಗಳಿಂದೆ ನೆಲಕೆನಿತು
ಚೆಲ್ವೋ ! ||೨||
ಸುಂದರಂ ಸಮಯಮಿದು, ಪಾವನಂ ದೃಶ್ಯಮಿದು!
ನೊಂದ ಹೃದಯಂ ತನ್ನ ನೋವನೀಗಳ್ ಮರೆತು
ನಿಂದುದಾನಂದಸೌರಭಮನೇ ಸವಿಯುತುಂ ! ಪೆಂಪೆನಿತೊ
ಸೌಂದರ್ಯದಾ !
ಸೌಂದರ್ಯಮೆಂಬುದಿದು ಜೀವಿತದ ಸರ್ವಸ್ವ-
ಮೆಂದು, ಸರ್ವವ್ಯಾಪಿ ಸೌಂದರ್ಯಮೀವಿಶ್ವ-
ಮಂದಿರದ ನೆಲೆಯೆಂದು, ಶಾಂತಿಸೌಂದರ್ಯದೀಯೆಡೆಯೊಳೀ-
ನರಿಯಲರಿದೇ ? ||೩||

ಜುಲೈ ೧೯೩೨

ಚಿತ್ರಸೃಷ್ಟಿ

## ೧೪ ಬುತ್ತಿ

ಇದು ಬುತ್ತಿ ! ಎನ್ನ ಕ್ಕರಿನ ತಂಗಿಯೆನಗೆ ಕ-
ಟ್ಟಿದ ಬುತ್ತಿ ! ಎಲೆ ನಿರ್ಮಳಂ ಪ್ರೇಮವೆನಿತಿನಿದೊ !
ಇದು ಹೃದಯವೇದನೆಗೆ ದಿವ್ಯೌಷಧಂ ಗಡಾ ! ಮೆಲ್ದವನ
ಸುಕೃತಮೆನಿತೋ !

ಇದರವೋಲೆನ್ನ ತಂಗಿಯ ಬುತ್ತಿವೋಲ್ ನಿಮ್ಮ
ಸೊದೆಯಿನಿದೊ, ಸಗ್ಗಿಗರೆ ? ಎಲೆಎಲೇ ಪ್ರೇಮವೆಂ-
ಬುದು ವಿಮಲಹೃದಯದಿಂದೊಗೆದವುದು, ನಿಮ್ಮ ಸೊದೆ
ನಿರ್ಜೀವವಾರ್ಧಿಯಿಂದೆ ! ॥೧॥

೨೭ ದಿಶೆಂಬರ ೧೯೩೨

ಚಿತ್ರಸೃಷ್ಟಿ

## ೧೫ ಮಳ್ಳಿ

ಕುಲುಕುಲು ನಗುವುದು
ಮಲಗಿದ ಕೂಸು ||ಪಲ್ಲ||

ಚೆಲುವಿನ ತೋಟದೊ-
ಳಲೆಯುತೆ ಬಂದು
ಚೆಲುವಿನ ಬಳ್ಳಿಯೊ-
ಳಲರನು ಕಂಡು ||೧||

ಮಿನುಗುವ ಮಂಜಿನ
ಹನಿಯೊಳು ಬಾಗಿ
ಮನದೊಲವಿಂದಾ-
ನನವನು ನೋಡಿ ||೨||

ತೊಳಗುವ ತಾರಗೆ-
ಗಳನೇ ತರುತೆ
ಸೆಳೆಮಿಂಚಿನ ನೂ-
ಲೊಳು ಪವಣಿಸುತೆ ||೩||

ಸರಸದೊಳೇರುತೆ
ಮರಿಯಂಚೆಯನು
ಸರಸಿಯೊಳಲೆಯುತೆ
ಮರಿದುಂಬಿಯನು ||೪||

೧೯೩೨

## ೧೬ ಬಡತನದ ಬೇಗೆ

ಕಂದಿದುದು ಜೀವಲತೆ ಪಸಿಯಾರೆ ಕಂಬನಿಗ-
ಳಂದದಿಂದೊಂದೆ ಎಲೆಯುದಿರೆ ಮನವಲರಿ-
ಪಂದಮಳಿದುದು, ಮುಗುಳ್ ಕೆಲವಿದೋ ಬಿರಿಯದೆಯೆ ಕಳೆಗುಂದಿ
ಕೊರಗುತೊಳಗೆ
ನಿಂದುವೈ ! ಬಿರಿದೊಡಂ ಕೆಲವು, ಸೊಗಯಿಸುವ ಮಕ-
ರಂದಮಿರದಕಟ ! ಬಗೆಯಾಸೆ ಬಯಲಾದುವೈ !
ಬಂದುದೇಸಗೆಯ ದಂದುಗಮಿದೆಲೆ ? ಉರಿಯೆನಿತಿದುಗ್ರವೋ
ದಾರಿದ್ರ್ಯದಾ ! ॥೧॥

ಚಿತ್ರಸೃಷ್ಟಿ

ನಿರಶನಂ ನಿನ್ನೆ, ಕೂಳಿಲ್ಲಮಿಂದೆಲೆ ನಾಳೆ-
ಯರೆಯೊಡಲ್ ! ಸೈರಿಸುವುದೆಂತಕಟ ! ಪಸಿವಿಗೇಂ
ಕರುಣೆಯೋ ? ಕರುಳ್ಗಳನೆ ತಿಂದಪುದು ! ಕಣ್ಗಳುಂ ಬತ್ತಿದಪು-
ವೀಂಟುವೋಗಿ !

ಸುರುಳ್ದತ್ತು ಮೆಯ್ದೊವಲ್ ಪೊಳೆಪಳಿದು, ಬರಿಯೆಲುಗ-
ಳಿರಿಯಲೆಂಬಿನಮದೇನಿಣಿಕುವುವೊ ! ಬುದ್ಧಿಯುಂ
ಸುದುಟಿದಪುದಿದು ಬಾಳೆ ? ಜನರೊಳಾಂ ಕೀಳಾದೆನೆಡೆಯಾದೆನ್ನೈ
ನಾಣ್ಚಿಗೆ ||೨||

ತೊರೆದೆನಾನಭಿಮಾನಮೂರ್ತಿಯಭಿಮಾನಮಂ !
ತಿರಿಯುತುಂ ತಿರುಗಿದೆಂ, ತಿಳಿಗೇಡಿಗಳ್ ನುಡಿದ
ಬಿರುವಾತುಗಳನೆಂತೊ ಸೈರಿಸಿದೆನ್ನೈ ! ಮನಕೆ ಕೂರಿತ್ತು ಮುಳ್ಳಿದಲ್ತೆ ?
ಭರತಭೂಮಿಯ ಸೇವೆ ಪೂರ್ವಪುಣ್ಯದಿನೆನಗೆ
ದೊರೆತಿರ್ಪುದೆಂಬೊಸಗೆಯಿಂದೆ ಬದುಕಿರ್ಪೆನಾಂ
ತಿರೆಯ ಮೇಲೆಂತಾನುಮಿಂ ಕೇಳದಿರ್, "ಬದುಕುವಾಸೆ
ನಿನಗೇಕಿದೆಂ"ದು ||೩||

೧೯೨೮

## ೧೭ ಮಳೆ ಬೀಳುತಲಿತ್ತು

ಮಳೆ ಬೀಳುತಲಿತ್ತು ! ಮಗಳೇ,
ಮಳೆ ಬೀಳುತಲಿತ್ತು ||ಪಲ್ಲ||

ಬಿರಿ ಬಿರಿ ಬೀಸುತಲಿದ್ದಿತು ಗಾಳಿ
ಬಿರುಸಿಡಿಲಾಗಳು ಮೊಳಗುತಲಿತ್ತು;
ಮರುಗುತೆ ಮುಗ್ಗುತೆ ನಡೆದನು, ಮನೆಯೊಳು
ಕುರುಡನನಾರೂ ಕರೆಯಲೆ ಇಲ್ಲಾ ! ||೧||

ಮಳೆಯೊಳು ನಡೆದನು, ತಪತಪ ತೊಯ್ದನು,
ಘಳ ಘಳ ಸುರಿದನು ಕಂಬನಿಗಳನು;
ಬಳಲಿದನಾತನು ಬಲು ಹಲುಬಿದನು !
ಹಳಹಳಿಸುವರಲ್ಲಿರಲೇ ಇಲ್ಲಾ ! ||೨||

ಕೊರಗುತೆ ಕೋಡುತೆ ಬರುತಿಹನಂಚಿಗೆ
ಹರಿವಾ ನೀರಿನ ಕಾಲುವೆಯೆಡೆಗೆ !
ಆರರೇ ! ಮತ್ತೊಮ್ಮೆಡವಿದನಾತನು !
ಹೊರಳಿದನಯ್ಯೋ ಕಾಲುವೆಯಲ್ಲಿ ! ||೩||

ಸಾಗಿತು ಸಾಗಿತು ಕಾಲುವೆಯಲ್ಲಿ
ವೇಗದೆ ಕೊಳಚಿಯ ಕೆಸರಿನ ನೀರು !
ಕೂಗಿತು ಕೂಗಿತು ಕೂಗಿತು ಗಾಳಿ
ನೀಗಿದನಾತನು ಜನ್ಮವನೊಮ್ಮೆ ! ||೪||

ಅಕ್ಟೋಬರ ೧೯೨೯

ಚಿತ್ರಸೃಷ್ಟಿ




ಪುಟ ೧೦೦

ಮಳೆಬೀಳುತ್ತಲಿತ್ತು

# ೧೮ ಏಂ ನ್ಯಾಯವೋ

ಮೞೆಯ ದಿನಮಿದು, ಕವಿದ ಕರ್ಮುಗಿಲ್ ಬಂಜೆಮುಗಿ–
ಲೞೆಯ ಮಣ್ಣೊಣಗಿದುದು, ಗಾಳಿಯಿದು ಕಣ್ಗಳೊಳ್
ಮಳಲನೆರಚುತೆ ಬೀಸುವುದು ಕರ್ಕಶಸ್ವನದೆ ಕೂಗುತುಂ ತೆರಪುಗುಡದೆ;
ಕೊಳದ ನೀರ್ ಬತ್ತಿದುದು, ಕೆಸರೊಳೇಂ ಬೇವಸಂ–
ಗೊಳುತುಮಿರ್ದಪುವೊ ಜಲಜೀವಿಗಳ್! ದೂಳಿಡಿದು
ಪೊಳೆಪಳಿದ ತರುರಾಜಿ ಮೈಯ್ವೆತ್ತ ದೈನ್ಯಮೆನೆ ಸಂತತಂ
ನಿಡುಸುಯ್ವುದು! ||೧||

ಇವನೊಕ್ಕಲಿಗನಿವನ ಕಣ್ಗಳೊಳ್ ಬೆಳಕಿಲ್ಲ–
ಮಿವನ ಕತೆ ಬರಿಯೆಲ್ಗಳಿಂ ವ್ಯಕ್ತಮಾದಪುದು!
ಶಿವ ಶಿವಾ! ಜಗಕನ್ನಮಂ ನಿರ್ಮಿಪಂಗಿಂತು ದುರ್ದಶೆಯೆ?
ಏಂ ನ್ಯಾಯವೋ!

ಇವನವೋಲಿನ್ನಾವನೈ ಲೋಕದೊಳಿತನೆಸ–
ಗುವ ನರಂ? ಪಸಿವು ಕರುಳನೆ ತಿನುತ್ತೀತನಂ
ಬವಣೆಗೊಳಗಾಗಿಸಿರೆ, ನಿನಗೆನಗೆ ಕೂಳನುಣಲಧಿಕಾರಮಿರ್ಪುದೆಂತು? ||೨||

ದಿಶೆಂಬರ ೧೯೩೨

ಚಿತ್ರಸೃಷ್ಟಿ

## ೧೯ ಹೆದರಿದುವೆನಗಕಟಾ

ಹೆದರಿದುವೆನಗಕಟಾ! ಅಕಟಾ! ||ಪಲ್ಲ||

ನೀರಿಗೆಳಸಿ ಬಂದುವು ಮೃಗವು
ನೀರನೆ ಕುಡಿಯದೆ ಮರಳಿದುವು! ||೧||

ನಲಿದುಲಿವಾ ನಲ್ನುಡಿಯ ಗಿಳಿ
ತೊಲಗಿ ನಡೆದುದಾ ಹೊದರ ಬಳಿ! ||೨||

ಮರಿಗೆ ಗುಟುಕನಿಕ್ಕುವ ಹಕ್ಕಿ
ಸರಿದುದೊಳಗೆ ಮುಂದದನಿಕ್ಕಿ! ||೩||

ದಿಸೆಂಬರ ೧೯೩೯

## ೨೦ ಎಚ್ಚರು !

ನರನ ನೈಜವನರಿವುದೆಂತಯ್ಯ ದಂಭವಾ-
ವರಿಸಿರಲು ? ಪರಹಿತವು, ನೀತಿ, ಸಂಸ್ಕೃತಿಯೆಂಬ
ಬರಿಯ ಬಾಯ್ಮಾತುಗಳ ಬಿರುವೊಯ್ಲಿಗಿದೊ ನುಚ್ಚು-
ನುರಿಯಾಗಿ ಬಿದ್ದಿಹುದು ಧರ್ಮವೆಂಬುದು, ನೋಡ !
ಬಾಯೊಳೊಂದೆದೆಯೊಳೊಂದಿದು ನೀತಿಯೇನಯ್ಯ ?
ಹೇಯವಾದುದರೊಳಾದರವೆ ? ದುರ್ದೈವಿಗಳೆ,
ಕೊಲುವುದೆಲೆ ನಿಮ್ಮನಾ ಜರ್ಜರಿತ ಧರ್ಮವೇ !
ಬಲದ ದರ್ಪದಲಿಂತು ಮೆರೆಯಬೇಡಿರಿ ಮರೆತು
ದೈವವನು ! ನೂರೊಂದು ತಪ್ಪುಗಳ ಗೆಯ್ತವನು
ಸಾವು ಹಾರುತಲಿಹುದು ಹಲ್ಗಳನು ಮಸೆಯುತ್ತೆ !
ಇದೊ, ಸುತ್ತಲೆಲ್ಲಿಯೂ ಹಲ್ಮಸೆವ ದನಿ ತುಂಬಿ-
ಹುದು ! ಸಿಡಿಲ ದನಿಯ ಮೂಳ್ಕೆಯೊಳುಗ್ರವಾಗಿಹುದು !

ಎಚ್ಚರೆಚ್ಚರು ! ದಂಭದಾವರಣವನು ನೀವು
ನಚ್ಚಿ ನಡೆದರೆ, ಬಿಡದು ಬಿಡದು ನಿಮ್ಮನು ಸಾವು !

ಡಿಸೆಂಬರ ೧೯೩೭

## ೨೧ ಹುಳು

ಹುಳು ಕುತಂತ್ರದ ರಚನೆ-
ಯೊಳು ಮನವನಿರಿಸಿ ತ-
ನ್ನಳವಿನೊಳು ವಿಶ್ವವನೆ
ಎಳೆಯಲೆಳಸಿತು, ನೋಡ! ||೧||

ಒಂದಿಂತು ಬಗೆಯಲಿ-
ನ್ನೊಂದು ಹುಳು ಕುದಿದು ಬೇ-
ರೊಂದು ತಂತ್ರವನೆಸಗ-
ಲೆಂದು ಬಂದುದು ಮುಂದೆ! ||೨||

ಚಿತ್ರಸೃಷ್ಟಿ

ಎಳಸಿ ಜಗದೊಡೆತನಕೆ
ಹುಳುಗಳಿಂತೆನಿತೊ ಮ–
ಣ್ಣೊಳಗಿಂದ ಮೇಲೆದ್ದು
ಬಳಸಿಮವು ಭೂಮಿಯನು! ॥೩॥

ಹೊರಗೆ ಬಂದಿಂತು ಮ-
ತ್ಸರದೆ ಮೆಯ್ಮರೆತು ಹ–
ಲ್ಗಿರಿದರಿಚುತೊಂದನೊಂ–
ದಿರಿದಿಕ್ಕಲೆಸಗಿದುವು ! ॥೪॥

ಅಳಿದುವೆನಿತೆನಿತೊ ಹುಳು–
ಗಳು ಕಾದುತುರುಳಿ ಮ–
ಣ್ಣೊಳಗೆ ನರಳಿದುವಳಿಯು–
ದುಳಿದ ಹುಳ್ಗಳು ನೊಂದು ! ॥೫॥

ಮೆರೆಯಲಾಗುವುದೆ ಜಗ–
ದೆರೆಯನನು ಕಡೆಗಣ್ಚಿ ?
ಅರಿವು ಕಿಡುವುದು ಮೊದಲು,
ಮರಣವಪ್ಪುದು ಬಳಿಕ ! ॥೬॥

ನವೆಂಬರ ೧೯೩೯

## ೨೨ ಸಾಧು

ಮಾನವನು ಮಣ್ಣಲ್ಲ,
ಮಾನವನು ಮಾನವನು !
ಮಾನವನ ಮಾನಾಪ-
ಮಾನಗಳು ದೇವನವು. ॥೧॥

ಮರೆತಿದನು ಕೆಲರವನ-
ನಿರಿಸಿ ಕಾಲ್ಕೆಳಗೆ ತುಳಿ-
ದರು, ಕೆಡೆದರಲ್ಲಿಯೇ
ಹುರಪಳಿಸಲಂಗಾಲು ! ॥೨॥

ಚಿತ್ರಸೃಷ್ಟಿ

ಒಳಲಿಸುವ ಹಸಿಹುಣ್ಣು-
ಗಳನು ಮಾಯಿಸಲೆಂದು
ತೊಳೆದೆಣ್ಣೆಯನು ತೊಡೆಯು-
ಲಿಳೆಯೊಳೊಗೆದನು ಸಾಧು. ||೩||

ಕರುಣಾಳು ಬಂದನಾ-
ನರಳುವರ ನೆರೆಯಲ್ಲಿ.
ಮರುಗಿದನು ಕಂಡವರ
ದುರವಸ್ಥೆಯನು ಸಾಧು ! ||೪||

ತೊಳೆಯಲವರಡಿಗಳನು
ಕುಳಿತನವರಡಿಯೆಡೆಯೊ-
ಳೆಳೆದುಕೊಂಡರು ಕಾಲು-
ಗಳನು; ಕೆಲರೊದೆದರ್ರೈ ! ||೫||

ಮುನಿಸು ಸೋಂಕದು ಸಾಧು-
ವನು ! " ಶಾಂತಿ ! ಶಾಂತಿ ! " ಯೆಂ
ದೆನುತವರನುಪಚರಿಸ-
ಲನುವಾದನನುನಯದಿ ! ||೬||

ನವೆಂಬರ ೧೯೩೯

ಚಿತ್ರಸೃಷ್ಟಿ

## ೨೩ ಮನಃಪಾವಿತ್ರ್ಯ

ಬಗೆಯೊಳುಣ್ಮಿದುದು ಗಡ ನಲ್ಮೆಗಳು ಶಾಂತಿ ನಲ್-
ಸೊಗಮಿದೋ ಸೃಷ್ಟಿಗೇಂ ಸೌಂದರ್ಯಮೊದವಿದುದೊ !
ಭಗವಂತ! ನಿನ್ನ ನಸುನಗೆಯಿಂದೆ ಪೊರೆದುವೆನೆ ವಸ್ತುಗಳ್ ರಮ್ಯಮಾಗೆ
ಪೊಗರೇರಿ ಪೊಳೆದಪುವು ! ಕರ್ಕಶತೆಯಿನಿತಿಲ್ಲು !
ಸೊಗಸಾಗೆ ಮಾರ್ದವಂ ಕಂಗೊಳಿಪುದೆತ್ತಲುಂ !
ಜಗದೊಳಗೆ ಸೊಂಪಿದೇಂ ಪರ್ಬಿದುದೊ ! ಮೇಲ್ಮೆಯೆಂತುಟೊ
ಮನಃಪಾವಿತ್ರ್ಯದಾ ! ॥೧॥

ಮಾರ್ಚ ೧೯೨೭

## ೨೪ ನೈರ್ಮಲ್ಯ

ಅಂದು ನೈರ್ಮಲ್ಯದಾನಂದವಮಂ ನೀನಿತ್ತೆ-
ಯೊಂದು ನಿಮಿಷಂ, ದೇವ ! ಸವಿದದರ ಸೊಬಗನಾ-
ನಂದಿನಿಂದದನಾವಗಂ ಬಯಸಿ ಬೇಡುವೆಂ ! ದೊರೆಯದದು,
ತಂದೆ, ಎನಗೆ !
ಕಂದಿದಪುದೈ ಜೀವಮುಕುಲಮಿದು ! ಕಾಣೆಯಾ ?
ಒಂದಿಲ್ಲಮೊಂದು ಪುಳು ಪೀರ್ದಪುದು ನಿಷ್ಠುರತೆ-
ಯಿಂದದರ ಪಸಿಯನೇ ! ನಿನ್ನಡಿಗೆ ಮುಡುಪಿಟ್ಟ
ನನೆಯಲರಲಾಗದೇನೈ ? ॥೧॥

ಚಿತ್ರಸೃಷ್ಟಿ

ಕೊಳಚೆಯೊಳ್ ಕೊಳೆಯಲೇಂ ಪುಟ್ಟಿದೆನೆ? ನೈರ್ಮಲ್ಯ–
ಕೆಳಸುವಂಗೇಕೆ ಕೊಳೆ? ಕಳ್ತಲೆಯ ಕುಳಿಯೊಳಾಂ
ಪುಳುವಲ್ತು! ದೇವ, ಪೊಲ್ಲಮೆ ಕಣ್ಗೆ ಕಿಸುರನೊದವಿಸಿವಪುದು
ಕಿಚ್ಚಿನಂತೆ!

ಬೆಳಕನಿತ್ತೆನ್ನ ನಿಂತಿರಿಸಿದಸಪೆಯೇಕೆ ಕ–
ಶ್ಮಲತೆಯೊಳ್? ಪೇಸುವುದು ಬಗೆ! ಶಕ್ತಿಯಳಿದಪುದು!
ಬಲಮಿಲ್ಲದಂಗೆ ನಿನ್ನಡಿಯಿಲ್ಲಮೆಂದು ಋಷಿವಚನ–
ಮೆರ್ದೆಗಿಡಿಸಿದಪುದು! ॥೨॥

ಸುಂದರಂ ಬದುಕು ನೈರ್ಮಲ್ಯದಿಂದಭಯಮುದ–
ರಿಂದದಕೆ, ಸುಂದರಂ ನಿಖಿಲಮೀವಿಶ್ವಮುದ–
ರಿಂದದಕೆ, ನೈರಾಶ್ಯಮಿಲ್ಲಮುದರಿಂದದಕೆ, ಶಾಂತಿಯುದರಿಂದಮುದಕೆ!
ಚೆಂದಮಿದು, ಚೆಂದಮೀ ಬದುಕು ಗಡ! ಸಮನಿಪುದ–
ದೆಂದೆನಗೆ? ದೇವ, ಪೇರತೇನಿರ್ದೊಡೇನೊ? ಆ–
ನಂದಮೊದವುವುದು ದಿವ್ಯಾನಂದಮೊದವುವುದು
ನೈರ್ಮಲ್ಯದಿಂದಮಲ್ತೆ? ॥೩॥

ನೆರವೀಯಿಮೆಲೆ ಜೀವಿಗಳಿರ, ಜಡಗಳಿರ, ದೇ–
ವರೆ, ವಿಶ್ವದವ್ಯಕ್ತ ಶಕ್ತಿಗಳೆ, ಕರುಣೆಯಿಂ
ನೆರೆವೀಯಿಮೀಯೆನ್ನ ಬಗೆಯಲರೊಳವಿತಿರ್ದ ಪುಳುಗಳಂ ದೂಡಲೆನಗೆ!
ಶರಣಾಗತೋಽಸ್ಮ್ಯಹಂ! ಶರಣಾಗತೋಽಸ್ಮ್ಯಹಂ!
ಪರಿಶುದ್ಧಿ ಪರಮೋಪಕಾರಿ, 'ಅದು ಜೀವನದ
ತಿರುಳೆಂದು ಕಂಡೆನಾನಂದಿನಾನಿಮಿಷದೊಳ್; ಕುಡುವುದದನೆನಗೆ,
ದೇವಾ! ॥೪॥

ದಿಸೆಂಬರ ೧೯೩೯

ಚಿತ್ರಸೃಷ್ಟಿ

ಭಾರತ ಚಕ್ರವರ್ತಿ ಅಶೋಕ ಮಹಾರಾಜನಿಗೆ ಉಪಗುಪ್ತನೆಂಬ ಧರ್ಮಗುರು ಇದ್ದನು. ಈತನು ಭೂತದಯಾಪರನೂ ವೈರಾಗ್ಯ ನಿಧಿಯೂ ಆಗಿದ್ದನು. ಬುದ್ಧಮತದ ಅಭಿವೃದ್ಧಿಗೆ ಈತನು ಸಲ್ಲಿಸಿದ ಸೇವೆ ಅಪಾರವಾದುದು.

ಒಂದು ರಾತ್ರಿ ಮಥುರಾ ನಗರಿಯ ಒಂದು ಬೀದಿಯ ಪಕ್ಕದಲ್ಲಿ ಈತನು ಮಲಗಿದ್ದನು. ವಾಸವದತ್ತೆ ಎಂಬ ವಿಖ್ಯಾತ ವಿಲಾಸಿನಿ ಯೊಬ್ಬಳು ಅಭಿಸಾರಿಕೆಯಾಗಿ ನಲ್ಲನೆಡೆಗೆ ಹೊರಟು ಅಲ್ಲಿಗೆ ಬಂದಳು. ಅವಳ ಕಾಲು ತಾಗಿ ಸಂನ್ಯಾಸಿ ಎಚ್ಚತ್ತನು. ಆತನ ಅಲೌಕಿಕ ರೂಪರಾಶಿ ಅವಳ ಮನಸ್ಸನ್ನು ಸೆಳೆದುಕೊಂಡಿತು.

" ಮಹನೀಯರೆ, ನನ್ನ ಮನೆಯಿರಲು ತಾವು ಹೀಗೆ ಈ ಬಿರುನೆಲ ದಲ್ಲಿ ಮಲಗಲೇಕೆ ? ದಯಮಾಡಿಸುವಿರಾ ಅಲ್ಲಿಗೆ ? "

ಬೆಡಗುಗಾತಿ ಭಿಕ್ಷುವನ್ನು ಬೇಡಿಕೊಂಡಳು.

" ನಿನ್ನ ಮನೆಗೆ ಬರಲು, ಸೋದರಿ, ಇದೀಗ ಸಮಯವು ಬಂದು ದಿಲ್ಲ. ಸಮಯವು ಬಂದರೆ ಬಂದೇ ಬರುವೆನು. "

ಮುನಿ ಮರುನುಡಿದನು.

ಚಿತ್ರಸೃಷ್ಟಿ

ಕಾಲವು ಗತಿಸಿತು. ದಿನಗಳು ಉರುಳಿದುವು. ವಸಂತಮಾಸದ ಒಂದು ಇರುಳು. ನಗೆಗಡಲ ನೊರೆಯಂತೆ ಎಲ್ಲೆಲ್ಲಿಯೂ ಹಬ್ಬಿದ ಬೆಳುದಿಂಗಳು. ಲೋಕವು ಸಂತೋಷ ಸಂಭ್ರಮದಲ್ಲಿ ಓಲಾಡುತ್ತಿರುವುದು.

ಅಂದಿನ ಆ ಮುನಿ ಅದೇ ಆ ನಗರಿಯ ಬೀದಿಗಳಲ್ಲಿ ಅಲೆಯುತಿರುವನು. ಬರುಬರುತ್ತ ಆತನು ಪುರದ ಹೊರಕ್ಕೆ ಬಂದನು. ಒಂದು ಮಾಮರದ ಅಡಿಯಲ್ಲಿ ಯಾರೊ ನರಳುತ್ತ ಮೈಮರೆತು ಬಿದ್ದುದನ್ನು ಕಂಡನು. ಅಯ್ಯೋ ಪಾಪ! ಯಾರಿರಬಹುದು?' ಎಂದು ಹತ್ತಿರ ಹೋಗಿ ನೋಡಲು, ಏನು ಅಚ್ಚರಿ! ಅಂದಿನ ಆ ಬಿಂಕದ ಸಿಂಗಾರಿ ಅಭಿಸಾರಿಕೆ ವಾಸವದತ್ತೆ! ಅವಳ ತಾರುಣ್ಯವು ಇಳಿದಿದೆ; ಲಾವಣ್ಯವು ಅಳಿದಿದೆ; ರೂಪವು ರೋಗದಿಂದ ಹಾಳಾಗಿದೆ. ಅನೇಕನಾಥೆಯಾದ ಅವಳು ಅನಾಥೆಯಾಗಿ ಪಟ್ಟಣಿಗರಿಂದ ಪರಿತ್ಯಕ್ತೆಯಾಗಿರುವಳು.

ಸಂನ್ಯಾಸಿ ಅವಳ ಬಳಿ ಕುಳಿತನು. ಅವಳ ತಲೆಯನ್ನು ತನ್ನ ತೊಡೆಯಲ್ಲಿ ಇರಿಸಿ ಉಪಚರಿಸತೊಡಗಿದನು. ಆತನ ದಯಾಸುಧೆಯ ಸ್ಪರ್ಶವು ಅವಳ ಬದುಕನ್ನು ಮರಳಿಸಿತು. ಅಕೆ ಎಚ್ಚತ್ತಳು.

"ಯಾರು ತಾವು?"

ಅನಾಥೆ ಕಂದೆರೆದು ಕೇಳಿದಳು.

"ಅವನೇ ನಾನು. ಇಂದು ಸಮಯವು ಒದಗಿತ್ತು; ಎಂದು ನಿನ್ನಲ್ಲಿಗೆ ಬಂದಿದೇನೆ!"

ಮುನಿವರನು ಉತ್ತರಿಸಿದನು.

× × × ×

ಅಭಿಸಾರ! ಅಭಿಸಾರಿಕೆಯ ಅಭಿಸಾರ. ಸಂನ್ಯಾಸಿಯ ಅಭಿಸಾರ. ಎರಡರಲ್ಲಿಯೂ ಪ್ರಣಯವಿದೆ, ಅನುನಯವಿದೆ. ಆದರೆ ಒಂದು ಅನುರಾಗಿ; ಇನ್ನೊಂದು ವಿರಾಗಿ! ಒಂದು ನಶ್ವರ; ಇನ್ನೊಂದು ಅಮರ! ಇದೊ ಅಭಿಸಾರ.

ಚಿತ್ರಸೃಷ್ಟಿ

# ಅ ಭಿ ಸಾ ರ

(೧)

ಇರುಳಲಿ ಮಥುರಾ-
ಪುರದಲಿ ಬೀದಿಯ
ಮರದಡಿಯಲಿ ಮಲ-
ಗಿರುವನು ಸಾಧು ||೧||

ಮಿಗೆ ಬೀಸುವ ಗಾ-
ಳಿಗೆ ನಡುನಡುಗುತೆ
ನಗರದೊಳಿಹ ದೀ-
ವಿಗೆ ನಂದಿಹುವು. ||೨||

ಮಳೆಗಾಲದ ಬಾ-
ನೊಳು ತಾರಗೆಗಳು
ಮೊಳಗುವ ಕರ್ಮುಗಿ-
ಲೊಳು ನುಸುಳಿಹುವು. ||೩||

ಚಿತ್ರಸೃಷ್ಟಿ

ಸೂಸುತೆ ಕುಸುಮುಸು–
ವಾಸಿತತನು ಮೃದು–
ಹಾಸದ ಸವಿಯನು
ವಾಸವದತ್ತೆ. ||೪||

ಇಂದುವದನೆಯೊನ–
ಪಿಂದಭಿಸಾರಿಕೆ
ಬಂದಳು ಮೆಲುಸರ–
ದಂದುಗೆಯುಲಿಯೆ. ||೫||

ಮುನಿಯನು ಸೋಂಕಿತು
ವನಿತೆಯ ಚರಣವು
ಮನದೊಳದೇನನೊ
ನೆನೆಯುತಲಿರಲು ! ||೬||

ತಡೆಯಾಗಲು ತ-
ನ್ನಡಿಗಿಂತಂಗನೆ
ತಡೆದಳು, ತಿಳಿಯದೆ
ನಡುನಡುಗಿದಳು. ||೭||

ಯತಿವರನನು ಪದ–
ಹತಿಯೊಡನೆಚ್ಚರಿ–
ಸಿತು; ಚಳಿಲನೆ ಮಿಂ–
ಚಿತು ಕೋಲ್ಮಿಂಚು. ||೮||

ಸದಯಾತ್ಮನು ನೋ-
ಡಿದನುಪಗುಪ್ತನು
ಇದಿರಲಿ ಯೌವನ–
ಮದಮತ್ತೆಯನು. ||೯||

ಚಿತ್ರಸೃಷ್ಟಿ

ಮಣಿಕಾಂಚನಭೂ–
ಷಣೆ ಮಾನಿನಿ ಕಿಂ–
ಕಿಣಿ ಝುಣಝುಣರೆನೆ
ಮಣಿದಳು ಮುನಿಗೆ. ॥೧೦॥

ಯುವತಿ ವಿನೂತನ–
ಯುವನನು ನವಹೃದ್-
ಭವನನು ನೋಡಿದ–
ಳಿವೆಯಿಕ್ಕದೆಯೆ. ॥೧೧॥

ಹೊಳೆಯುತಿಹುವು ಕಣ್–
ಗಳು ಕಾರುಣ್ಯದ
ತಿಳಿವೆಳಕಿಂದಾ–
ಜಳಜಾನನನಾ. ॥೧೨॥

ಮೃದುಲಶ್ಯಾಮನ
ವದನದೊಳೆಸೆದುದು
ಮೃದುಮಧುರಸುಹಾ–
ಸದ ನಲ್ವೆಳಗು. ॥೧೩॥

ಒಲವಿಂದಲಿ ಸುಮ-
ದಲಮೃದುಲಾಂಗಿ
ಮೆಲುದನಿಯಿಂದಲಿ
ಲಲನೆ ನುಡಿದಳು. ॥೧೪॥

"ಮಾರಮನೋಜ್ಞ ಕು–
ಮಾರಕಿಶೋರಾ,
ತೋರುವುದೆನ್ನೊಳು–
ದಾರಾ, ಕ್ಷಮೆಯನು. ॥೧೫॥

“ ಬಲು ಬಿರಿಸಿಹುದೀ–
ನೆಲವು, ಸುಮಂಗಲ;
ಮಲಗಲಿಕೆನ್ನಯ
ನಿಲಯಕೆ ಬಾರಾ ! ” ||೧೬||

ಕರುಣಾಮಧುರಸ-
ಸುರುಚಿರವಚನದೆ
ಮರುನುಡಿದನು ಮುನಿ–
ವರನೀತೆರದೆ. ||೧೭||

“ ಸುಂದರಿ, ನಿನ್ನಯ
ಮಂದಿರಕ್ಕೈತರ–
ಲಿಂದು ಸಮಯವು
ಬಂದಿಹುದಿಲ್ಲ ! ||೧೮||

“ ಹೊರಟಿರುವಲ್ಲಿಗೆ
ತೆರಳುವುದಿನ್ನು ;
ಬರೆ ಸಮಯವು ನಾ–
ನಿರದೆ ಬರುವೆನು. ” ||೧೯||

ಸುಳಿಯಿತು ಗಾಳಿ;
ಹೊಳೆಯಿತು ಮಿಂಚು;
ಮೊಳಗಿತು ಮುಗಿಲೊಳು
ಪ್ರಳಯದ ಭೇರಿ ! ||೨೦||

ಇಳೆಯೊಳದೆತ್ತಲು
ಇಳಿದುದು ನೀರು;
ಅಳುಕುತೆ ನಟಿ ಮನ–
ದೊಳು ಕದಲಿದಳು ! ||೨೧||

(೨)

ಸಂದಿತು ಕಾಲವು;
ಬಂದಿತು ಮುದುರಿತು;
ಚೆಂದವದೆನಿತೋ
ಮಂದಾನಿಲನಾ ! ||೨೨||

ಪರಿವೆಳಗಾಳಿಗೆ
ನರುಗಂಪೆನಿತೋ
ಪರಿಮಳದಿಂದರೆ-
ವಿರಿದಲರುಗಳಾ ! ||೨೩||

ಚೆಂದಳಿರುಗಳಿಂ-
ದಂದವನಾಂತೆನಿ-
ತೊಂದು ಮಹೀರುಹ-
ವೃಂದವು ನಲಿವುದೊ ! ||೨೪||

ಎಳವೆಣ್ಗಳ ಪೊಂ-
ಗೊಳಲುಲಿಯಿಂದಲಿ
ಕಳರವವಾದುದು
ಸುಳಿವೆಳಗಾಳಿ. ||೨೫||

ಇನಿಗಂಪಿನ ಸೊಬ-
ಗಿನ ಮಧುವನದಲಿ
ಜನರಿರುವರು ಹೂ
ವಿನ ಹಬ್ಬದಲಿ. ||೨೬||

ಪುರವದು ಬರಿದಾ-
ಗಿರುವುದನಿಂತು
ನಿರುಕಿಸಿ ಶಶಿ ನಗು-
ತಿರುವನು ಮೌನದೆ ! ||೨೭||

ಮುನಿ ನಡೆದನು ನಿ-
ರ್ಜನವೀಥಿಯೊಳೊ-
ರ್ವನೆ ಬೆಳುದಿಂಗಳಿ-
ನಿನಿವೆಳಕಿನೊಳು. ||೨೮||

ಇದೊ ಯತಿಯಭಿಸಾ-
ರದ ಸಮಯವು ಬಂ-
ದುದು ಮಧುಮಧುಮಾ-
ಸದ ರಾತ್ರಿಯಲಿ ! ||೨೯||

ಸ್ಥಿರಮತಿ ನಗರದ
ಹೊರಗೈತಂದನು
ನರುಗಂಪಿನ ಮಾ-
ಮರಗಳ ಬನಕೆ. ||೩೦||

ಎಲೆ ಈಮರದಡಿ-
ಯಲಿ ವ್ಯಥೆಯಿಂದೆ
ಬಲು ಬಳಲುತಲಿಹ
ಲಲನೆಯದಾರೋ ? ||೩೧||

ಸುದತಿಯ ಹೊಂಬ-
ಣ್ಣದ ಮಿರುಗುವ ಪೂ-
ರ್ವದ ತನು ಶೀತಳಿ-
ಗದು ಕಂದಿಹುದು ! ||೩೨||

ಅರರೇ, ನಂಜನು
ತೊರೆವಂತವಳನು
ತೊರೆದೊಗೆದಿರುವರು
ಪುರವಾಸಿಗಳು ! ||೩೩||

ಕುಳಿತನವಳ ಬಳಿ-
ಯೊಳು ಕರುಣಾನಿಧಿ
ಬೆಳುದಿಂಗಳು ಪಾಲ್-
ಮಳೆಯನು ಕರೆಯೆ. ||೩೪||

ವನಿತೆಯ ಶಿರವನು
ಮುನಿಯಿರಿಸಿದನೊ-
ಯ್ಯನೆ ತನ್ನಂಕದೊ-
ಳನುನಯದಿಂದೆ. ||೩೫||

ಘಳಿಲನೆ ಸುರಿದನು
ತಿಳಿನೀರಿನ ಹನಿ-
ಗಳನಾರಿದ ತುಟಿ-
ಗಳೊಳಮಲಮತಿ. ||೩೬||

ಕಂದಿ ನೊಂದು ಬಲ-
ಗುಂದಿದ ಮೆಯ್ಯನು
ಚಂದನರಸದ-
ಣ್ಪಿಂದೆ ತೊಡೆದನು ||೩೭||

ಅಲರುಗಳೆಲ್ಲಾ
ಕುಲುಕುಲು ನಕ್ಕುವು;
ಒಲವಿಂದಲಿ ಮೆ-
ಲ್ಲೆಲರು ತೀಡಿತು ! ||೩೮||

ಚಿತ್ರಸೃಷ್ಟಿ

ವಿನಿಮೀಲಿತಲೋ-
ಚನೆ ನಟ, “ ಕರುಣಾ-
ಘನ ! ಆರ್ಯ ನೀ-
ನೆ”ನುತೆ ನುಡಿದಳು. ||೩೯||

“ ಇಂದೆಲೆ ವನಿತೇ,
ಬಂದುದು ಸಮಯವು;
ಬಂದಿರುವೆನು ನಾ-
ನೆಂ”ದನು ಸಾಧು. ||೪೦||

ಕರುಣಾಕರ, ಕೃತಿ-
ಸರಸೀರುಹವನು
ಗುರು, ನಿನ್ನಡಿಗಳೊ-
ಳಿರಿಸುವೆನಿದನು.

೧೨೪



* ಮೂಲದಲ್ಲಿ ಯಾವೊಂದು ಪರಿವಿಡಿಯಿಂದ ಇಲ್ಲಿಯ ಪದ್ಯಗಳು ರಚಿತವಾಗಿರಲಿಲ್ಲ. ಈ ಕವನದ ಮೊದಲಿನ ಯೋಜಕರು ಮೊದಲು ಬಾರಿ ಇವುಗಳನ್ನು ಕ್ರಮಪಡಿಸಿ ಪ್ರಕಾಶನಕ್ಕೆ ಅನುಗೊಳಿಸಿದರು. ಈ ಹಿಂದಿನ ಅನುಕ್ರಮದಲ್ಲಿ ಯುಕ್ತವಾಗಿ ತೋರಿದಂತೆ ಕೆಲವು ಮಾರ್ಪಾಟುಗಳನ್ನು ಇದೀಗ ಮಾಡಿದುದಾಗಿದೆ.

ಚಿತ್ರಸೃಷ್ಟಿ

ಕವಿಗೆ ಒಬ್ಬನೇ ಒಬ್ಬ ಮಗನಿದ್ದನು. ಅವನು ಶ್ರೀಕೃಷ್ಣ. ಈತನು ಪ್ರಬುದ್ಧನಾಗಿ ಕೈಗೆ ಬಂದು ಅಕಾಲ ಮೃತ್ಯುವಿಗೆ ತುತ್ತಾದನು!

ಕವಿಯ ಜೀವನವು ಕಷ್ಟಮಯವಾದುದು. ಸಹಚರಿಯಾದವಳು ಈ ಮೊದಲು ನಡುವಯಸ್ಸಿನಲ್ಲಿಯೆ ಅಗಲಿ ಹೋಗಿದ್ದಳು. ಇದ್ದೊಬ್ಬ ಮಗನು ಕಾಲಾಧೀನನಾದನು. ಅತಿಘೋರ ಆಘಾತವಿದು. ಸುಖವಾಗಲಿ, ದುಃಖವಾಗಲಿ, ಅಳತೆ ಮೀರಲು ಉಕ್ಕಿ ಬರುವುದು. ಅಪಾರವಾದ ಅಳಲಿಗೆ ಈಡಾದ ಕವಿಹೃದಯವು ಉರಿಯುರಿದು ಕಿಡಿಕಿಡಿಯಾಗಿ ಹೊರಚೆಲ್ಲಿತು. ಕಾದ ಕಂಬನಿಗಳು ಭಾವಪ್ರವಣತೆಯಿಂದ ಕವನವಾಹಿನಿಯಾಗಿ ಹರಿದುವು.

ಕಷ್ಟಮಯವಾದ ಜೀವನದಲ್ಲಿ ಮನೆಯೆಂಬುದೊಂದು ಆನಂದಸ್ಥಾನ. ಶ್ರೀಕೃಷ್ಣನ ನಿಧನದಿಂದ ಆ ಮನೆಯೆ ಮುರಿದು ಬಿದ್ದಿತು. ಈ ಸಂಸಾರದಲ್ಲಿ ಹುಟ್ಟಿ ಬಂದು ಇದುವರೆಗೆ ಅನೇಕ ಸಂಕಷ್ಟಗಳನ್ನು ಸೋಸಿಯಾಯಿತು. ಹಿಂದಿನದು ಹಿಂದುಳಿಯಲಿ; ಇನ್ನು ಮುಂದೆಯಾದರೂ ನೆಮ್ಮದಿಯ ದಾರಿ ದೊರೆಯಬಹುದು; ಎಂದು ಕವಿ ನೆನೆದಿದ್ದನು. ಶ್ರೀಕೃಷ್ಣನೇ ಆತನ ಸರ್ವಾಧಾರವಾಗಿದ್ದನು; ಇಂದು ಆಧಾರವೇ ಕುಸಿಯಿತು!

ಆಸೆಯೆ ಬಾಳಿನ ತಾಯಿ ಬೇರು; ಬೇರು ಕತ್ತರಿಸಿದ ಬಳಿಕ ಇನ್ನಾವ ಆಸೆಯಿಂದ ಬದುಕಬೇಕು? ತನ್ನ ಆತ್ಮವನ್ನೇ ಖತ್ತಿ, ನೀರೆರೆದು ಬೆಳಸಿದ ಬಳ್ಳಿ ಕೊನರಿ ನನೆಯೇರುವನಿತರಲ್ಲಿ ಕಮರಿ ಕರುಕಾಯಿತು. ಮುಂಜಾವಿನ ಆ ತಂಬೆಳಗು, ಆ ಮೆಲುಗಾಳಿ, ಆ ಅಲರು-ನಗೆ, ಆ ನರುಗಂಪು, ಆ ನಲಿವು ಇನ್ನೆಲ್ಲಿ ದೊರೆವುದು?

ಮೃತ್ಯು! ಮೃತ್ಯು!! ಮೃತ್ಯು!!! ಎನಿತು ಕರಾಲ ಆಕೃತಿಯಿದು! ಎನಿತು ಘೋರ ರೂಪವಿದು! ತನ್ನ ಪಾಶದಲ್ಲಿ ಸಿಲುಕಿಸಿ ಶ್ರೀಕೃಷ್ಣನನ್ನು ಸೆಳೆದೊಯ್ದ ಕ್ರೂರ ಕಾಲಪುರುಷನು ಲೋಕವನ್ನೇ ವ್ಯಾಪಿಸಿ ನಿಂತಿರುವನು! ಮೃತ್ಯು!

ಕರುಳುಗಳು ಕಲಕು ಮಲಕಾಗಿ ಹೊಸೆಯುತಿರುವುವು, ಉರಿ! ಬೆಂಕೆ!! ಇದರ ಜ್ವಾಲೆಗಳಿಂದ ಅಂಗಾಂಗಗಳು ದಗ್ಧವಾಗುತ್ತಿರುವುವು. ಮಗ! ನನ್ನ ಮಗನೆಲ್ಲಿ? ಅಯ್ಯೊ! ಎಲ್ಲೆಲ್ಲಿಯೂ ಆತನ ಚಿತ್ರವು

ಕಣ್ಣ ಮುಂದೆ ಕುಣಿಯುತಲಿದೆ! ಆದರೆ ಆತನು ಮಾತ್ರ ಬಳಿಯಲ್ಲಿ ಸುಳಿಯುತ ಇಲ್ಲ.

ಏನೋ ಮಗನು; ಮಗನಂತೆ ಮಗನು; ಮಗನೆಂದು ಹೇಳಿಕೊಳ್ಳ ಬೇಕು; ಎನ್ನುವುದೆ? ಶ್ರೀಕೃಷ್ಣನು ಕುಲದೀಪಕನಾದ ಸುಪುತ್ರ; ನಯವಿನಯವಂತ; ವಿಧೇಯ; ಸಕಲರಲ್ಲಿ ಸ್ನೇಹಪರ. ಈ ಚಿಕ್ಕ ವಯಸ್ಸಿನಲ್ಲಿಯೆ ರಾಷ್ಟ್ರದೀಪಕನಾಗುವ ಗುಣಗಳನ್ನು ಪ್ರಕಟಿಸಿ ದವನು; ಧೈರ್ಯಶಾಲಿ; ರಾಷ್ಟ್ರಾಭಿಮಾನಿ; ಭಾರತದ ಸ್ವಾತಂತ್ರ್ಯ-ಸಂಗ್ರಾಮದಲ್ಲಿ ಕನ್ನಡ ನಾಡಿನ ಕಲಿಯಾಗಿ ಕೊಳಗುಳಕೆ ಧುಮುಕಿ ದನು (೧೯೪೨). ಇಂತಹ ಶ್ರೀಕೃಷ್ಣ !

ದೇವಾ! ನನ್ನಿಂದ ಅಗಲಿಸಿ ಮಗನನ್ನು ಕರೆದೊಯ್ಯುವಲ್ಲಿ ನಿನ್ನ ಸಂಕಲ್ಪವೇನು? ಹಣ್ಣಾಗುವ ಮುನ್ನ ಎಳಗಾಯಿಯನ್ನು ಕೊಯ್ದು ಲಾಭವೇನು? ದೇವಾ! ನೀನು ನಿಷ್ಠುರ, ಕ್ರೂರಾತ್ಮನಲ್ಲವೆ? ಅಹ! ಆ ವಿಶ್ವಚಾಲಕನ ಯೋಜನೆಯನ್ನು ಯಾರು ಎಂತು ಅರಿಯ ಬಲ್ಲರು? ವಿಶ್ವಮಂದಿರದ ಅದ್ಭುತ ಶಿಲ್ಪಿಯಾದ ನೀನು ನಿನ್ನ ಕೆಲಸಕ್ಕೆ ಶಿಲೆಗಳನ್ನು ಅನುಗೊಳಿಸಿಕೊಳ್ಳುವಾಗ ಸುತ್ತಿಗೆಯಿಂದ ಏಟು ಹಾಕುವೆ. ಒಂದು ಕಲ್ಲು ಒಡೆದುಹೋಯಿತು; ನಿಜ. ಆದರೆ ಅದಕಾಗಿ ನೀನು ದುಷ್ಟನೆನಿಸಬಲ್ಲೆಯಾ? ಒಡೆದ ಕಲ್ಲು ಹದವಾಗಿ ಅಮೃತಶಿಲೆ ಆಯಿತು; ದೇವಾಯತನಕ್ಕೆ ಒಪ್ಪಿತು. ಜೀವನಸಾರ್ಥಕ್ಯ ವನ್ನು ಪಡೆಯಿತು. ಅಲ್ಲವೆ?

ಬಂದರೆ ಹಿಗ್ಗಲೇಕೆ? ಹೋದರೆ ಕುಗ್ಗಲೇಕೆ? ಕೊಟ್ಟವನು ಕೊಂಡೊಯ್ದರೆ ಅಳಲೇಕೆ? ಕೊಡಲು ಬಲ್ಲವನಿಗೆ ಒಯ್ಯಲು ಅಧಿಕಾರವಿಲ್ಲವೆ? ಕೊಟ್ಟನೇಕೊ? ಒಯ್ದನೇಕೊ? ಅರಿತವರಾರು? ಅಲ್ಪ ಜೀವಿಗಳಿಗೆ ಇನಿತು ದೂರ ಯೋಚನೆ ಎಲ್ಲಿ? ಅಂತೆಯೆ ಈ ಕೊರಗು! ಈ ಮಿಡುಕಾಟ!!

**ವಿಶ್ವಶಿಲ್ಪಿಯ ಕೈವಾಡಕ್ಕೆ ಎಡೆಯಾದ ಶ್ರೀಕೃಷ್ಣನ ಬಾಳು ಸಫಲವಾಯಿತು.**

ತನಯಾ, ಈ ಜನಕನ ಜಲಾಂಜಲಿ ನಿನಗೆ! ಮಗುವೆ, ಈ ತಂದೆಯ ತಿಲಾಂಜಲಿ ನಿನಗೆ!!

ಚಿತ್ರಸೃಷ್ಟಿ

# ಪ್ರಾರ್ಥನೆ

ಭುಗಿಲೆನುತೆ ಮೇಲ್ವಾಯ್ದು ಬರ್ಪ ದಳ್ಳುರಿಯ ನಾ-
ಲಗೆಗಳುಗ್ರತೆಯೆನಿತೊ ! ಶುದ್ಧಾತ್ಮನವನೆನ್ನ
ಮಗನಾದನಾದನಾಹುತಿ ! ಸುಡುತೆ ಮುಂಬರಿವು-
ವಿವನೆಂತು ಸೈರಿಸುವುದೊ ?
ಸುಗಿವೆನ್ನೆ ಸುತ್ತಲುಂ ಪರ್ಬುವೀಯುರಿಗಳ್ಗೆ !
ಭಗವಂತ ! 'ಶಾಂತಿ !' ಎನ್ನೈ, ತಂದೆ ! ನಿನ್ನ ನ-
ಲ್ಮೆಗೆ ಪಾತ್ರವಾನಲ್ತೆ ? ನೀಂ ಶಕ್ತಿ ! ಸೈರಿಸಲ್
ಶಕ್ತಿಯಂ ದಯೆಪಾಲಿಸಾ ! ||೧||

ಬಿರುಗಾಳಿ ಬೀಸುವುದು ಕಡುಪಿಂದೆ ಬಿರ್ರೆನು-
ತ್ತುರಿಗಳಂ ಪೆರ್ಚಿಸುತ್ತಮುಮು ಕರ್ವೊಗೆಗಳ-
ಬ್ಬರದೆ ವಿಷಮುಂ ತೂರುತುಸಿರನೇ ಕುಗ್ಗಿಪುವು !
ದುರ್ಬಲಂ ಜೀವಮಾಯ್ತು !
ಅರರೆ ! ಮೆಯ್ ಕುಸಿದಪುದು ! ಕಣ್ಗೆ ಕಳ್ತಲೆಯಾಯ್ತು !
ಕರುಣಾಳು , ಕೈನೀಡು ! ನೀನಲ್ಲದಿನ್ನಾರ
ನೆರವೆನಗೆ ? ವಿಶ್ವಪತಿ, ನೀಂ ತಂದೆ ! ನೀಂ ಮಗಂ !
ನೀನೆನ್ನ ಸಕಲಬಂಧು ! ||೨||

ನಡೆವುದೈ ನೀನೆನ್ನ ಜತೆಯೊಳೆಡೆವಿಡದೆ ಕೆ-
ಯ್ವಿಡಿದಿನ್ನು ಮಗನವೋಲೀ ಕವಿದ ಕಳ್ತಲೆಯ
ನಡುವೆ ನೀಂ ಬೆಳಕಾಗಿ ! ನೀಂ ನಿರಾಧಾರರಾ-
ಧಾರವಾನೆಂದು, ದೇವಾ,
ನುಡಿದುದಂ ನಂಬಿರ್ಪೆನಾನನನ್ಯನೊ, ತಂದೆ !
ನುಡಿವುದೈ ಅಭಯುವೆಂದೆನಗೊರ್ಮೆ ! ಭೀತಿಯಂ
ಬಿಡಿಸುವುದು ಭಗವಂತ ! ಕರ್ತವ್ಯಪಥದೊಳೇ
ನಡೆಯಿಸುವುದೆನ್ನನೊಲ್ದು ! ||೩||

ಚಿತ್ರಸೃಷ್ಟಿ

# ತಿಲಾಂಜಲಿ

ಬೆಳಗಿನಲಿ ಮಂಜುವನಿ
　　ಹೊಳೆಯುತೆಳದಳಿರಲ್ಲಿ
ಎಳಗಾಳಿಯೊಡನಾಡಿ
　　ತಿಳಿಯಲೀಯದೆ ಹೋಯ್ತು ! ॥೧॥

ಆಗಳಿನ ಬಿರಿಮುಗುಳ-
　　ನೀಗಳೆಲ್ಲಿಯು ಕಾಣೆ-
ನಾಗಳಿನ ಪರಿಮಳವ-
　　ದೀಗಳೆಲ್ಲಿಯು ಇಹುದು. ॥೨॥

ಹದಿನೆಂಟು ವರುಷಗಳ
　　ಬದುಕೆಂಬುದೆಳಗಾಯಿ;
ಅದು ಪಕ್ವವಪ್ಪುದಕೆ
　　ಮೊದಲೆ ಕೊಯ್ದೊಯ್ವುದೇ ? ॥೩॥

ಮುಗಿದುವಾಪತ್ತುಗಳು;
　　ಸೊಗಮೆನಗೆ ಮುಂಪೆಂದು
ಬಗೆದೆನಂದಿದ್ದೊಬ್ಬ
　　ಮಗನಿಂದು ತೀರಿದನು ! ॥೪॥

ಚಿತ್ರಸೃಷ್ಟಿ

ಒದವುವುದೆ ಸವಿಯೆನಗೆ
ಬದುಕಿನಲಿ ಮುಂದಿನ್ನು ?
ಇದಿರಲ್ಲಿ ರೌದ್ರರೂ–
ಪದ ಮಿಳ್ತು ಕುಣಿವುದೈ ! ||೫||

ಕರುಳುಗಳು ಮರಮರಳಿ
ಮುರಿಗೆಗೊಳ್ಳುವುವಯ್ಯ !
ಹಿರಿದು ಹಿರಿದಲೆ ನೋವು !
ಪರಿಹರಿಸುವವರಾರು ? ||೬||

ಉರಿ ಬೇಯಿಸುವುದಲ್ಲಿ !
ಉರಿ ಬೇಯಿಸುವುದಿಲ್ಲಿ !
ಹರಿ ಹರೀ ! ಸೈರಿಸೆನು !
ನೆರವಾಗು ! ನೆರವಾಗು ! ||೭||

ಅಲ್ಲಿ ಮಗನಿಲ್ಲಿ ಮಗ–
ನೆಲ್ಲೆಲ್ಲಿಯೂ ಮಗನು !
ಇಲ್ಲವೈ ಇಲ್ಲವನ
ಬೆಲ್ಲದಂತಹ ಸೊಲ್ಲು ! ||೮||

ಅಂದಿನಾ ಮಸಣದುರಿ
ಅಂದುವೇ ನಂದಿದುದು;
ಅಂದಿನಾ ಹೃದಯದುರಿ
ಎಂದಿಗೂ ಉರಿವುದೈ ! ||೯||

ಕರದೀಪವಾರಿದುದು !
ಮುರಿದುದೈ ಕೈಗೋಲು !
ಇರುವೆನಡವಿಯೊಳೆನಿತೊ
ಇರುವುದಿನ್ನೂ ದಾರಿ ! ||೧೦||

ಚಿತ್ರಸೃಷ್ಟಿ

ಮುಂದಿನ್ನು ನಡೆಯದೊಡೆ
ಕುಂದೆನಗೆ ಬರದಿಹುದೆ?
ಇಂದಿನೀ ಬನ್ನದಲಿ
ಮುಂದೆ ನಡೆವುದದೆಂತೊ? ॥೧೧॥

ಇಳೆಯೊಳೆಲ್ಲಿಯು ಹೊರಗೆ
ಸುಳಿಯುತಿಹುದಿಲ್ಲವನು!
ಉಳಿದೆನ್ನ ಹೃದಯದೊಳೆ
ಸುಳಿದಾಡುತಿಹನಲ್ಲಿ! ॥೧೨॥

ತನಯ, ನಿನ್ನಾಮೊಗದೊ-
ಳೆನಿತು ಗಾಂಭೀರ್ಯವೋ!
ಮನದ ಬಲವೆನಿತೆಂಬು-
ದನು ತೋರಿಸಿತು ಮೊಗವು ॥೧೩॥

ಮಗು, ಪವಿತ್ರವು ನಿನ್ನ
ಬಗೆ! ಮರಣಸಮಯದಲಿ
ಹೊಗಳಿದುದು ನಿನ್ನ ನಾ-
ಲಗೆ ವಿಶ್ವದೊಡೆಯನನು! ॥೧೪॥

ಅಂದು ಪತಿಸತಿಯರೊಲ-
ವಿಂದೆ, ತಂದೆಯೆ, ನಿನ್ನ
ಮುಂದೆ ಹಚ್ಚಿದ ದೀಪ-
ವಿಂದು ನಂದಿದುದಕಟ! ॥೧೫॥

ಮಡಿದರೆನ್ನೆ ಳವೆಯೊಳು
ಹಡೆದವರು; ಹರಯದಲಿ
ಮಡಿದಳೆನಿಯಳು; ಮತ್ತೆ
ಮಡಿದನೈ ಮಗನಿಂದು! ॥೧೬॥

ಎಂತೊ ನಾನೀವರೆಗೆ
　　ನಿಂತಿಹುದು ಜಗದೊಳಗೆ ?
ಸಂತತವು ಆಪತ್ತು !
　　ಸಂತತವು ಆಪತ್ತು ! ||೧೭||

ಬದುಕಿರುವೆನಹುದಹುದು !
　　ಬದುಕಿ ಮಾಡಿದೆನೇನೊ ?
ಕುದಿವುದೆದೆ, ಕುದಿವುದೆದೆ !
　　ಬದುಕೆ ಹುರುಳಿಲ್ಲದುದು ? ||೧೮||

ಅಳುವುದನುಚಿತವೆಂದು
　　ತಿಳಿಯದಿರುವೆನೆ ನಾನು ?
ಅಳಲೆ ನಾನಾಗಿರುವೆ-
　　ನಳಲು ಕೈಮೀರಿದುದು ! ||೧೯||

ರೆಕ್ಕೆ ಮೊಳೆಯದ ಮುನ್ನ
　　ಹಕ್ಕಿ ಹಾರಲು ಹೋಗಿ
ಕಕ್ಕುತಲಿ ನೆತ್ತರನು
　　ಮುಕ್ಕದಿರುವುದೆ ಮಣ್ಣ ! ||೨೦||

ಅದೊ ಅಲ್ಲಿ ಬೆಂಕಿ ಸುಡು-
　　ವುದು ಮಗನ ದೇಹವನು !
ಇದೊ ಇಲ್ಲಿ ಸುಡುತಿಹುದು
　　ಹೃದಯವನು ತಂದೆಯಾ ! ||೨೧||

ನಡೆದೆನಾನವನೊಡನೆ,
　　ನಡುನೀರೊಳಿದ್ದೆವೈ !
ಹಿಡಿದುದವನನು ಮೃತ್ಯು,
　　ಮಡುವಿಗೊಯ್ದುದು, ದೇವ ! ||೨೨||

ಚಿತ್ರಸೃಷ್ಟಿ

ಒಡೆಯ, ಜವನಿಟ್ಟುರದ
ತೊಡಕಿನಲಿ ಬಿದ್ದೆನೆದೆ-
ಗಿಡೆನೆ ಎನ್ನನು ನೀನು
ಬಿಡಿಸದಿರಲದರಿಂದೆ ? ||೨೩||

ಮರೆಯಾದ ಮಗನೆಂದು
ಕರುಳು ಕೊರಗುವುದಯ್ಯ !
ಹರಿ, ನೀನೆ ಮಗನಾಗಿ
ಕರುಣಿಪುದು ! ಕರುಣಿಪುದು ! ||೨೪||

ಬೆಳಕುಂಟು ಹೊರಗೆ; ಕ
ಣ್ಣೊಳಗೆ ಬೆಳಕಿನಿತಿಲ್ಲ !
ಕುಳಿ-ತೆವರು-ಮುಳ್ಳುಗಳಿ-
ಗಳುಕಿ ಬಗೆ ನಡುಗುವುದು ! ||೨೫||

ಕಾರೊಳಗೆ ಕೈವಿಡಿದು
ದಾರಿಯನು ನಡೆಯಿಸೈ !
ಬೇರಾವುದನು, ದೇವ,
ಕೋರಲೊಲ್ಲೆನು ನಾನು ! ||೨೬||

ಕುರುಡನಿಗೆ ಬೆಳಕೇನೊ,
ಇರುಳ ಕತ್ತಲೆಯೇನೊ ?
ಎರವಾದೆ ನಿನಗೆ ನಂ-
ಬಿರದೆ, ಚಿನ್ಮಯ, ನಿನ್ನ ! ||೨೭||

ಕರುಣಾಂಬುನಿಧಿ, ನಿನ್ನ
ನೆರವಿಲ್ಲದಿರಲು, ಪಾ-
ಮರನು ನಾನೆಂತು ಬದು-
ಕಿರುವುದೀ ಕಾಡಿನೊಳು ? ||೨೮||

**ಚಿತ್ರಸೃಷ್ಟಿ**

ಮುಂದೆನಗೆ ಬರುವುದೇ–
ನೆಂದು ಚಿಂತಿಸಲೊಲ್ಲೆ.
ಇಂದಿನದು ಪಥವಾವು–
ದೆಂದು ಹೇಳುವುದೆನಗೆ. ||೨೯||

ಸತತವೂ ಯತ್ನಿಸುವೆ
ಧೃತಿಗುಂದದಿರಲು ಸಂ–
ಸೃತಿಯ ಬಂಧದ ಬಿಗುವು
ಮತಿಗೆಡಿಸುತಿರಲಿತ್ತ. ||೩೦||

ಆದುದಾಗಲಿ, ನಿನ್ನ
ಪಾದದಾಸರವಿರಲಿ
ಈ ದಿನದೆ ಮುಂದೆನಗೆ,
ಹೇ ದಯಾಂಬುಧಿ ದೇವ ! ||೩೧||

ಮನವ ತೋಷಿಪ ವಸ್ತು-
ವನು ಸೃಜಿಸಿ ನೀನದನು
ಇನಿತು ಬೇಗನೆ ಮರುಕ–
ವನು ತೊರೆದು ಮುರಿವುದೇ ? ||೩೨||

ಗುಡಿಯ ಕಟ್ಟುವ ಶಿಲ್ಪಿ
ಕೊಡತಿಯೊಳು ಬೆಟ್ಟ ಕ–
ಲ್ಲೊಡೆವುದನು ಕಂಡವನ
ಕಿಡುಕನೆಂದೆನಲಹುದೆ ? ||೩೩||

ಆವೆಡೆಯೊಳೊಂದುವುದ-
ದಾವುದೆಂಬುದನರಿತು
ದೇವದೇವನು ಹುಟ್ಟು
ಸಾವುಗಳನೆಸಗುವನು. ||೩೪||

ಇರದಿಲ್ಲವೀ ತತ್ವ–
 ದರಿವೆನಗೆ; ಮಗನು ಕಣ್–
ಮರೆಯಾದನೆಂಬಳಲ
 ಮರೆಯಲಾರೆನದೇಕೆ? ||೩೫||

ನಿನ್ನ ವಿನಯವು ಶಾಂತಿ
 ನಿನ್ನ ಧೈರ್ಯವು ಭಕ್ತಿ
ನಿನ್ನ ಕುಲಶೀಲಸಂ–
 ಪನ್ನತೆಯನರುಹಿದುವು. ||೩೬||

ರಣಗೊಂಬು ಕರೆದೊಡನೆ
 ಕುಣಿದುದಾತನ ಹೃದಯ!
ಮಣಿದೆನ್ನ ಕಾಲ್ಗಳಿಗೆ
 ರಣಕೆ ನಡೆದನು ವೀರ! ||೩೭||

ಕರೆವುದೈ, ಶ್ರೀಕೃಷ್ಣ,
 ಮರಳಿಯಿದೊ ರಣಭೇರಿ!
ಕೊರೆಯುತಿಹುದೆದೆಯನಿದು,
 ಕರೆಯಲಿನ್ನಾರನೈ? ||೩೮||

ಎನ್ನ ಕುಲದೊಳು ನಾಡಿ–
 ಗಿನ್ನು ಕೊಡುವೆನದಾರ–
ನೆನ್ನನಲ್ಲದೆ? ತಾಯೆ,
 ಎನ್ನನೇ ಸ್ವೀಕರಿಸೆ! ||೩೯||

ಅಂದು ಮೃತ್ಯುವಿನ ಬಾ–
 ಯಿಂದೆ ಮಗನನು ಕಾಯ–
ಲೆಂದು ಬಂದವರಿಗೊಲ–
 ವಿಂದೆ ತಲೆವಾಗುವೆನು. ||೪೦||

ಬಿಡಲಿಲ್ಲವೆನ್ನನೀ
ಬಡತನವು ಸಾವನಕ !
ಕೊಡುವರಾರನ್ನವನು
ದುಡಿವುದಾಗದ ಬಳಿಕ ? ||೪೧||

ನರಲುತಲಿ ಬಿದ್ದಿಹುದು;
ಹೊರಗೊಂದು ನಾಯಿಮರಿ !
ಬಿರಿವುದೆದೆ ! ನಿರ್ಗತಿಕ-
ರಿರವೆನಿತು ದಾರುಣವೊ ! ||೪೨||

ಅಂದಿದ್ದ ದುಃಖವೇ
ಇಂದಿಗೂ ಅಳುಕುವುದು.
ಅಂದು ಕಂಬನಿ ಹರಿದು-
ದಿಂದು ಬಗೆ ಬತ್ತಿಹುದು ! ||೪೩||

ಜಲಧಿಯಲಿ ಗುರಿಯಿಲ್ಲ-
ದಲೆಗಳಲಿ ತೇಲುತಿಹ
ತೊಲೆಯವೊಲು ಜೀವವೇ-
ನಲೆಯುಲಿರುವುದೆ ಇಲ್ಲಿ ? ||೪೪||

ಎನಿತು ಜೀವದ ತತ್ವ
ವನು ತಿಳಿದು ಜಗದಲ್ಲಿ
ಅನವರತವೂ ಸತ್ಯ-
ವನು ಚರಿಸುವವರಿಹರು ? ||೪೫||

ಅರಿವನಿದನಾರರುಹಿ-
ದರು ನಿನಗೆ ? ಮಗನೆ, ನಿ-
ನ್ನಿರವಿನಲಿ, ಹೂವಿನೊಳು
ಪರಿಮಳದವೊಲು, ಚೆಲುವು ! ||೪೬||

ಕುಲದ ಹೆಸರಿಗೆ ನಿನ್ನ
        ಕೆಲಸದಿಂದಲಿ ಬೆಳಕು !
ಕುಲದ ಮಾನವ ಕಾಯ್ದು
        ಕುಲದೀಪವಾದೆಯ್ಯ ! ||೪೭||

ಇದು ತಿಲಾಂಜಲಿ, ಮಗನೆ !
        ಇದು ತಿಲಾಂಜಲಿ, ತಂದೆ !
ಇದೊ ಅಜ್ಜ, ಮುತ್ತಜ್ಜ !
        ಇದು ತಿಲಾಂಜಲಿ ನಿಮಗೆ ! ||೪೮||

ಮಾರ್ಚ ೧೯೩೨



ಎನಿತು ಯೋಚಿಸಿ, ಎನಿತು ಯತ್ನಿಸಿ ಫಲವೇನು ? ದೈವದ ಮುಂದೆ ಓಡಬಹುದೆ ? ಎಲ್ಲವು ಈಶನ ಅಧೀನ. ಆತನು ಇರಿಸಿದಂತೆ ಇರುವುದೇ ಜೀವನ. ಮಾನವನಿಗೆ ತಿಳಿವನ್ನು ನೀಡಿ ಕರ್ತವ್ಯಗಳನ್ನು ತೋರಿಸಿ ಕೊಟ್ಟಿದಾನೆ ವಿಧಾತನು. ಈ ಹೊಣೆಯನ್ನು ಗುರುತಿಸಿ ಆಚರಿಸುವುದೆ ಜನ್ಮಸಾಫಲ್ಯ.

ಇದಕ್ಕಾಗಿ ಆ ದಯಾಮಯನು ಶಕ್ತಿಯನ್ನು ದಯಪಾಲಿಸಲಿ, ಆತನ ಆದೇಶವನ್ನು ಅರಿತುಕೊಳ್ಳಲು ಅಂತಃಕರಣವನ್ನು ಅಮಲವಾಗಿ ಇರಿಸಲಿ. ಇದುವೆ ನಿವೇದನೆ; ಇದುವೆ ಅರಿಕೆ.

## ನಿವೇದನೆ

ತಳೆವೆನ್ನೆ ತಲೆಯಲ್ಲಿ ನೀನಿತ್ತ ಭಾರಮಂ ! !
ತಳಮಳಂಗೊಳದೆ ಮುನ್ನಡೆವೆನ್ನೆ, ಒಡೆಯ ! ನಿ–
ರ್ಮಳ ಭಾವಮಂ ಕರುಣೆಯಿಂದೆನ್ನ ಹೃದಯದೊಳ್
ನಿಲಿಸುವುದು, ದೇವ ದೇವಾ !
ಕುಳಿತೆವರ್ಮುಳ್ಗಳಿಂದೆಲ್ಲಿಯುಂ ವಿಷಮಮೀ– ।
ಯಿಳೆ; ಆದೊಡೇನಳ್ಕಿ ಕಾಲ್ಗುಸಿದು ಭಾರಮಂ
ಕೆಳಗಿರಿಸಲೊಲ್ಲೆನ್ನೆ ! ನೀನಾಳ್ದನಾಳ್ವೆ
ಸಮೆ ಸಲ್ವ ಕರ್ತವ್ಯಮೆನಗೆ

೧೯೩೨

# ತಿಳುಹು

'ಚಿತ್ರಸೃಷ್ಟಿ'ಯಲ್ಲಿಯ ಗಡುಸಾದ ಕೆಲವು ಸಂದರ್ಭಗಳನ್ನು ವಿಶದಗೊಳಿಸುವ ತಿಳುಹಿನ ಮಾತುಗಳಿವು.

## ಕನ್ನಡಂ—ಪು. ೯

ಎಲರ್=ಗಾಳಿ; ಮೆಲ್ಪು=ಸುಕುಮಾರತೆ; ಕದಪು=ಗಲ್ಲ; ಬಿರಿವೂ=ಅರಳುವ ಹೂ; ಸರ=ಸ್ವರ; ನರುಗಂಪು=ಸುಗಂಧ; ನರುದಂಬಲ=ಸುವಾಸಿಕ ತಾಂಬೂಲ.

## ಕನ್ನಡವು—ಪು. ೧೦

ಒಸೆದು=ಸಂತೋಷಿಸಿ; ಗೆಯ್ಮೆ=ಕರ್ತೃತ್ವ.

## ತಾಯ್ನಾಡು—ಪು. ೧೧

ಅಲಂಪು=ಸೊಬಗು, ವೈಭವ; ಸೈಪು=ಪುಣ್ಯ; ಅರ=ಧರ್ಮ; ಪನ್ನತಿಕೆ=ಪರಾಕ್ರಮ; ಓವರಿ=ನೆಲೆ; ಅಳ್ತಿ=ಪ್ರೀತಿ; ನನ್ನಿ=ಸತ್ಯ; ಆಡುಂಬೊಲ=ಆಡುವ ಸ್ಥಳ; ಆರವೆ=ತೋಟ, ಆರಾಮ (ದ್ಭ); ಒಳ್ಪು=ಚೆಂದ; ಅಮರ್ದು=ಅಮೃತ (ದ್ಭ).

## ವಿಜಯದುಂದುಭಿ—ಪು. ೧೩

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಆರುನೂರು ವರ್ಷದ, ನೆನವರಿಕೆಯ ಹಬ್ಬದ ಸಂದರ್ಭದಲ್ಲಿ ಬರೆದುದು.

ಪಿಂತು=ಹಿಂದೆ; ಪಲ್ಗಳೊಳ್ ಪುಲ್ಗಚ್ಚಿ=ಹಲ್ಲಲ್ಲಿ ಹುಲ್ಲು ಕಚ್ಚಿ, ಶರಣಾಗತಿಯ ಚಿಹ್ನ; ಬಾಳ್ವೆಣ=ಬಾಳುವ ಹೆಣ; ಕುಳಿ=ತಗ್ಗು; ಪಿಸುಣ=ದುಷ್ಟತನ; ಒಡರಿಸಿದ=ಒದವಿಸಿದ; ಎರಪ=ಎರಗುವ; ಮಿಳಿರ್=ಹಾರಾಡು.

## ಬೇಸಗೆ (೧)—ಪು. ೩೫

ಬೇಸುರಿ=ಬಿಸಿಯಾದ ಉರಿ; ಚೆಚ್ಚರದಿಂದೆ=ಬೇಗ; ಎರೆಂಕೆ=ರೆಕ್ಕೆ; ಬೆಂಗಾಳಿ=ಬಿಸಿಗಾಳಿ; ಪುರುಳಿ=ಹೆಣ್ಣುಗಿಳಿ; ಒಲವಲರೆ=ಒಲವು ಅಲರೆ, ಪ್ರೀತಿ ಹೆಚ್ಚಲು; ನನೆ=ಮೊಗ್ಗು; ನಲ್ಮೆದಣ್ಣೆಲರ್=ಪ್ರೇಮವೆಂಬ ತಂಗಾಳಿ.

## ಬೇಸಗೆ (೨)—ಪು. ೩೬

ಬಾಂಬರಂ=ಮುಗಿಲವರೆಗೆ; ಬಲ್ಗರ್=ಪ್ರಚಂಡ ರಾಕ್ಷಸ; ಬಿಸಿಗದಿರ=ಸೂರ್ಯ; ಉರ್ಬಟಿ=ಕುದಿತ; ಬಲ್ಗಿಚ್ಚಿನ ಆಗಾರಕೆ=ಅತಿದಾಹಕ ಅಗ್ನಿಯ ನೆಲೆಗೆ-ಸೂರ್ಯನಿಗೆ. ಮೊದಲನೆಯ ಪದ್ಯದಲ್ಲಿ ಬೇಸಗೆಯಲ್ಲಿ ಏಳುವ ಹಿರಿದಾದ ಸುಂಟರ ಗಾಳಿಯನ್ನು ಕ್ರೂರ ಮಹಾರಾಕ್ಷಸನಾಗಿ ಕಲ್ಪಿಸಿದೆ. ತನ್ನ ಮೈಯಿಂದ ಹೊರಡುವ ಉರಿಗಾಳಿಗಳಿಂದ ಆತನು ಎಲ್ಲರನ್ನು ಬಳಲಿಸುವನು; ಕಾದ ಬಂಡೆಗಳನ್ನು ಅಪ್ಪಿಕೊಂಡು ಎಚ್ಚರದಪ್ಪಿ ಗರಗರನೆ ತಿರುಗುತ್ತ ಸುಂಯ್ ಎಂದು ಶಬ್ದಮಾಡುತ್ತ ನೆಲದಿಂದ ಮುಗಿಲವರೆಗೆ ಬೆಳೆದು ನಾನಾ ಲೀಲೆಗಳನ್ನು ತೋರುವನು. ಶೆಲ್ಲಿ ಕವಿ Ode To The West Wind ಎಂಬ ಕವನದಲ್ಲಿ ಬಿರುಗಾಳಿಯನ್ನು ಘೋರ ಯಕ್ಷನಿಗೆ ಸಮಗೊಳಿಸಿದಾನೆ. ಇದು ಬೇಸಗೆಯ ಗಾಳಿ; ಅದು ಮಳೆಯ ಗಾಳಿ. ಆದರ ವಿಧಾನ ಇಂತು.

There are spread
On the blue surface of thine airy surge,
Like the bright hair uplifted from the head
Of some fierce Maenad, even from the dim verge
Of the horizon to the Zenith's height
The locks of the approaching storm.

## ಬಿರುಗಾಳಿ—ಪು. ೩೭

ಆಗುರ್ವಿಸು=ರಭಸಗೊಳ್ಳು; ಕಿನಿಸಿ ಕಿಂಕಿರಿ ವೋಗಿ=ರೇಗಿ ಕಿಡಿಕಿಡಿಯಾಗಿ; ಪರ್ವ= ಹುಣ್ಣಿಮೆ; ಅಳವಿಗಳೆದ=ಮಿತಿಮೀರಿದ; ಕಾಳಿಮ=ಅಂಧಕಾರ; ನೀರ್=ಸುರಿಮಳೆ; ನೊರೆವಿಂಡು, ಬಾಳೆ ಮೀನ್—ಇರುಳ ಕಗ್ಗತ್ತಲೆಯ ಮಿಂಚಿನ ಬೆಳಕಿನಲ್ಲಿ ಹೊಳೆವ ಮಳೆಯ ಸೋನೆಯನ್ನು ಒಮ್ಮೆ ಕತ್ತಲೆ ಎಂಬ ಕಡಲಿನ ನೊರೆಯಾಗಿಯೂ ಇನ್ನೊಮ್ಮೆ ಮೀನುಗಳಾಗಿಯೂ ಕಲ್ಪಿಸಿದೆ; ಪೊಚ್ಚಳಿಸು=ಹೊಸಪರಿಯಿಂದ ಪ್ರಕಟವಾಗು; ಸಂರಾವ=ಆರ್ಭಟಿ.

## ಮುಂಗಾರ್—ಪು. ೩೮

ಎಚ್ಚು=ಎಸೆದು; ಕಾರ್ ಮುಗಿಲ್=ಮಳೆಗಾಲದ ಮೋಡ; ಸಂರಂಭ=ಗಲಭೆ, ಹುಯ್ಯಲ್ಲು; ಸಿರತೆ=ಸೌಂದರ್ಯ; ಕಡು ಮಸಗಿ=ಬಲು ರೊಚ್ಚಿಗೆದ್ದು.

## ನವವೃಷ್ಟಿ—ಪು. ೩೯

ಎಲೆವರೆ=ಎಲೆಯ ಮರೆ; ಮೆಯ್ಗರೆ=ಅಡಗು, ಮರೆಯಾಗು; ಮುಗಿಲ್=ಮೋಡ; ಕಿಸುಗಣ್ಚೆ=ಕಣ್ಣು ಕೆಂಪಗೆ ಮಾಡಿ; ಉಗಿಬಗಿಮಾಡು=ಚದರಿಸು, ಗಾಬರಿಗೊಳಿಸು; ಉರಿವರಿ=ಉರಿಯನ್ನು ಹರವು, ಉದ್ರೇಕಿಸು; ಮಸುಳದ=ಹಿಂದೆಗೆಯದ; ಬಾಳ್ವಾಸೆ=ಬಾಳುವ ಆಸೆ; ಪ್ರಸ್ಫುರಚ್ಛವಿ=(ಮಿಂಚಿನಿಂದ) ಹೊಳೆವ ಕಾಂತಿಯುಳ್ಳ; ಪದೆಪು=ತೇಜಸ್ಸು; ಸಾಯದರ ...ಗುರಿಯಾಗರಾರೊ ?=ಸಾವಿಲ್ಲದವರನ್ನು ಕೊಲ್ಲಲು ಎಳಸಿ ಅಧಮಕೃತಿ ಮಾಡುವವರು ತಾವೇ ಗಾಸಿಯಾಗುವರು. ಈ ಅರ್ಥಾಂತರನ್ಯಾಸ ಅಲಂಕಾರವು ಹೃದ್ಯವಾಗಿದೆ. ಅಂಬುವಾಹ= ಮೋಡ; ಕದಕ್ಕದಿಸು= ತುಂಬಿ ತಾಕಲಾಡು; ಪೊಸದೇಸಿ= ಹೊಸ ಬೆಡಗು.

ಈ ಕವನದ ಮೊದಲಿನ ಮೂರು ಪದ್ಯಗಳಲ್ಲಿ ಸೃಷ್ಟಿಯಲ್ಲಿ ನಿರಂತರವಾಗಿ ನಡೆವ ಒಂದು ಸಂನಿವೇಶವನ್ನು—ಬಿಸಿಲುಮಳೆಯ ಹೋರಾಟವನ್ನು ರಮ್ಯವಾಗಿ ಚಿತ್ರಿಸಿದೆ. ಈ ಕಾದಾಟದ ಮೂರು ಅಂತಸ್ತುಗಳಿವು. ೧) ಬಿಸಿಲೆಂಬ ದುಷ್ಟ ರಾಜನು ಈ ಲೋಕದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿ ಜೀವಿಗಳನ್ನು ಬಗೆ ಬಗೆಯಾಗಿ ಹಿಂಸಿಸುತಲಿದಾನೆ. ಅದನ್ನು ನೋಡಿ ಪ್ರಾಣಿಗಳ ಗೋಳನ್ನು ಹಿಂಗಿಸಲು ಮೋಡವೆಂಬ ಉಪಕಾರಿಯೊಬ್ಬನು ತಲೆಯೆತ್ತುವನು. ಆತನನ್ನು ಬಡಿದಟ್ಟಿ ಬಿಸಿಲು ಕ್ಷಣಕಾಲ ಜಯಶೀಲವಾಗುವುದು. ೨) ಈ ಸೋಲಿನಿಂದ ಎದೆಗುಂದದೆ ಆ ಉಪಕಾರಿ ಮತ್ತೆ ತನ್ನ ಕಾರ್ಯವನ್ನು ಮುಂದುವರಿಸುವನು. ಮಿಗಿಲಾದ ಸಾಹಸವನ್ನು ಎಸಗಿ ಅನ್ಯಾಯದ ಅಧಿರಾಜ್ಯವನ್ನು ನಿರ್ಮೂಲಗೊಳಿಸಲು ಪಂಥತೊಡುವನು; ತನ್ನ ಶಕ್ತಿಯನ್ನು ಬೆಳೆಯಿಸಿ ಪ್ರಬಲನಾಗುವನು. ೩) ಮೋಡದ ಶಕ್ತಿಗೆ ಗೆಲುವು ದೊರೆವುದು. ಅದರ ಪ್ರಭಾವವು ಎಲ್ಲೆಲ್ಲಿಯೂ ಹರಡಿ ಬಿಸಿಲ ಸದ್ದು ಅಡಗುವುದು. ಬಳಿಕ ಲೋಕವೆಲ್ಲ ತಂಪುಗೊಂಡು ನಲಿದಾಡುವುದು.

## ಕಾಳ್ಪುರಂ—ಪು. ೪೧

ಅಳದಪ್ಪಿ= ವಶಮೀರಿ; ಕಿನ್ನೆಲ= ಪಾತಾಳ; ಮಂದ್ಯೆಸಿದ= ಹೆಚ್ಚಾದ; ಬೆಳತಿಗೆ= ಬಿಳುಪು; ಸಂವ್ಯಾನ= ಸೆರಗು; ನಲ್ಲುಣಿಸು= ಸವಿತಿಂಡಿ.

ಈ ಕವನವು ರೂಪಕ ಮತ್ತು ಉತ್ಪ್ರೇಕ್ಷೆ ಈ ಅಲಂಕಾರಗಳಿಂದ ಹೆಣೆದುದಾಗಿದೆ. ಮೊದಲಿನ ಪದ್ಯದಲ್ಲಿ ರೂಪಕ, ಅಮೇಲೆ ಉತ್ಪ್ರೇಕ್ಷೆಗಳು ಒಂದರ ಮುಂದೊಂದು ಸಾಲು ಹಿಡಿದು ಮಾಲೆಗೊಳ್ಳುವುವು. ಐದನೆಯ ಪದ್ಯದ ಉತ್ತರಾರ್ಧದಲ್ಲಿ ಮತ್ತೊಂದು ರೂಪಕವಿದೆ. ಇವುಗಳಿಂದ ಈ ಗೀತವು ಸೊಬಗುಗೊಂಡಿದೆ.

## ಹಿಂಗಾರ್—ಪು. ೪೩

ದೆಸೆಬಿದ್ದ= ದಿಕ್ಕುಗಳಲ್ಲಿ ಹರಹಿದ; ಪಸಲೆ= ಹಸಿರುಹುಲ್ಲ ಹಬ್ಬುಗೆ; ಅಂದಿನ= ಮಳೆಗಾಲದ ಆರಂಭದ, ಮುಂಗಾರ.

## ಮುಂಜಾವು—ಪು. ೪೫

ಎರಡನೆಯ ಪದ್ಯದಲ್ಲಿ ಅರಳಿದ ಮಲ್ಲಿಗೆ, ತೆರೆಗಳ ಮೃದು ಸಪ್ಪಳ, ಮತ್ತು ತಳಿರು ಇವುಗಳನ್ನು ಅನುಕ್ರಮವಾಗಿ ವನದೇವಿ, ಜಳದೇವಿ, ಭೂದೇವಿಯರ ನಸುನಗೆ, ನಗೆಯ ಕುಲುಕುಲು ಧ್ವನಿ, ಮತ್ತು ಅಂಗೈಯ ತಟ್ಟುವಿಕೆಯಾಗಿ ಕಲ್ಪಿಸಿದುದು ಕೌತುಕಾಸ್ಪದವಾಗಿದೆ. ಅಣೆ= ತೊಡೆ. ಮೂರನೆಯ ಪದ್ಯದ ಎರಡನೆಯ ಅರ್ಧದ ಭಾವ—ಹೂಬಿಸಿಲಲ್ಲಿ ಕೆಂಪು ಕೆಂಪಾದ ಬೆಳ್ಳಕ್ಕಿ ತನ್ನ ಮೈಯನ್ನು ನೋಡಿಕೊಂಡು ಸೋಜಿಗಪಟ್ಟಿತು.

## ಚಿತ್ರಸೃಷ್ಟಿ—ಪು. ೫೨

ವಿಕಟ= ವಿಕಾರವಾದ; ಕಿಸು ಮುಗಿಲ್= ಕೆಂಪು ಮೋಡ; ಕಣ್ಬೊಲನಾಗಿ= ಗೋಚರವಾಗಿ, ಕಾಣುವುದಾಗಿ; ಸುವಿಧಾನ= ಪ್ರಮಾಣಬದ್ಧ ರಚನೆ.

## ಜಡಮಲ್ಲ ವಿಶ್ವ—ಪು. ೫೫

ಬೆಲೆವರಲ್= ರತ್ನ; ಕೋಡು= ತಂಪಾಗು; ಪೊಗರ್= ಕಾಂತಿ. ಎರಡನೆಯ ಪದ್ಯದಲ್ಲಿ ಮಳೆ–ಮಿಂಚಿನ ಸಂನಿವೇಶವನ್ನು ಹೀಗೆ ಉತ್ಪ್ರೇಕ್ಷಿಸಿದೆ:— ಮೋಡಗಳು ಆಸೆಬುರುಕತನದಿಂದ ಸೂರ್ಯ ಕಿರಣಗಳನ್ನು ಗಬಗಬನೆ ತಿಂದುವು. ಆದರಿಂದ ಹೊಟ್ಟೆ ಕೆಟ್ಟು ಅವು ನೀರು–ಬಿಸಿಲನ್ನು ಕಾರಿಕೊಂಡುವು. ಅದುವೆ ಈ ಸುರಿಮಳೆ, ಕೋಲುಮಿಂಚು! ನಡೆಗೋಂಟೆ= ನಡೆದಾಡುವ ಕೋಟೆ; ಅಗ್ಗಿ= ಅಗ್ನಿ.

## ಪಸಲೆ—ಪು. ೬೧

ಒಂದನೆಯ ಪದ್ಯ — ಹಸಿರು ಹುಲ್ಲಿನಲ್ಲಿ ಜೇಡಬಲೆಗಳು ಹಬ್ಬಿದ್ದುವು; ಅವುಗಳ ಮೇಲೆ ಮಂಜಿನ ಹನಿ ಬಿದ್ದು ಅಂಟಿಕೊಂಡುವು. ಇದು ಹಸಿರುಪಚ್ಚೆ ಹಾಸಿನ ಮೇಲಿನ ಬಿಳಿಯ ಚಿತ್ತಾರದಂತೆ ತೋರಿತು. ಪಸದನ= ಸಿಂಗಾರ, ಅಲಂಕಾರ; ಕೇತನ= ಆವಾಸ.

## ಸ್ವಪ್ನಸೃಷ್ಟಿ—ಪು. ೬೨

ಕನಸಿನಲ್ಲ ಕಂಡ ಒಂದು ಪ್ರಕೃತಿ ಚಿತ್ರವಿದು. ಬಲು ಎತ್ತರ ಎತ್ತರವಾದ ಗುಡ್ಡ; ಅದರ ಮಗ್ಗುಲಲ್ಲಿ ಆಳವಾದ ಕೊಳ್ಳದಲ್ಲಿ ಬೆಳ್ಳಬೆಳ್ಳನೆ ಕೆಳಕೆಳಗೆ ಹರಿದು

ಹೋಗುವ ಹೊಳೆ; ಗುಡ್ಡದ ಶಿಖರವೇರಿ ಹಾರಲು ಯತ್ನಿಸುವಂತಿರುವ, ಕೈಲಾಗದೆ ನರಳುತ ಬೆವರಿಡುವಂತೆ ತೋರುವ ಒಂದು ಮೋಡ; ಈ ಮೋಡವನ್ನು ನುಂಗಲು ಮುಂದುವರಿದ ಇನ್ನೊಂದು ಹಿರಿ ಮೋಡ; ಆಚೆಗೊಂದು ಚಿತ್ರವಿಚಿತ್ರ ಸುಗಂಧಿ ಹೂಗಳ ವನ; ಅಲ್ಲಿ ನಲಿದಾಡುವ ತುಂಬಿಯ ಬಳಗ; ಇದು ಈ ಚಿತ್ರದ ವಸ್ತುವಿನ್ಯಾಸ.

ನೀಳ್ದ= ಉದ್ದವಾಗಿ ಬೆಳೆದ; ನಿರ್ನೆರಂ= ವ್ಯರ್ಥವಾಗಿ; ದೇವತಾತ್ಮ= ದೇವತೆಗಳ ನೆಲೆಯಾದ ಹಿಮಾಲಯ ಪರ್ವತ— ಇಲ್ಲಿ ಪ್ರಚಂಡವಾದ ಈ ಗುಡ್ಡವನ್ನು ಹಿಮಗಿರಿಯೆಂದು ಕಲ್ಪಿಸಿ ಸಂಬೋಧಿಸಿದೆ.

## ರಾಮನಗುಳಿ—ಪು. ೭೨

ಕಾರವಾರ ಜಿಲ್ಲೆಯ 'ರಾಮನಗುಳಿ' ಎಂಬ ಹೆಸರಿನ ಒಂದು ರಮ್ಯ ವನ ಪ್ರದೇಶವನ್ನು ಕಂಡು ಮೂಡಿದ ಭಾವಗಳು ಈ ಕವನದಲ್ಲಿ ರೂಪುಗೊಂಡಿವೆ.

## ಮುದ್ದಣ—ಪು. ೮೩

ಸುಯ್ಯೆಲರ್= ಉಚ್ಛ್ವಾಸದ ಗಾಳಿ; ಒಡಲಿಚ= ಮದನ; ಪೂಣ್ಬು= ಬಾಣ; ಕಣ್ಗೆ ಎಡ್ಡವಾಗಿ= ಕಣ್ಣಿಗೆ ರಮ್ಯವಾಗಿ; ಅವ್ವಳಿಸಿ= ಮುಕುರಿ; ಅಲರಿಡಿದು= ಹೂವಿನಿಂದ ತುಂಬಿ; ಕಳರುತಿಯ= ಮುದ್ದು ತೊದಲು ಮಾತಿನ.

## ವೀಣೆಯ ತಂತಿ—ಪು. ೯೨

ಮೈಸೂರ ಆಸ್ಥಾನದ ಸಂಗೀತ ವಿದ್ವಾನ್ ಶ್ರೀ. ದೇವೇಂದ್ರಪ್ಪನವರ ವೀಣೆಯನ್ನು ಕೇಳಿ ಬರೆದುದು.

## ಸಂಗೀತದ ಚೆಲ್ವು—ಪು. ೯೩

ಸಂದರ್ಭ— ಸೌ. ನಂದಾವರ ಶಕುಂತಲಾ ದೇವಿಯರು ಕವಿಯ 'ಕನ್ನಡದ ನೆಲದ ಪುಲ್ಲೆನಗೆ ಪಾವನತುಲಸಿ' ಎಂಬ ಪದ್ಯವನ್ನು ಹಾಡಿ ತೋರಿಸಿದುದು.

---

# ತಪ್ಪು-ಒಪ್ಪು

ಆವು ಅಟ್ಟದ ಮೇಲೆ ಕರು ಬೆಟ್ಟದ ಮೇಲೆ ಇಂತಹ ನಿರುಪಾಯದ ಪರಿಸ್ಥಿತಿಯ ಮೂಲಕ ಮುದ್ರಣದೋಷಗಳು ಎಡೆಗೊಂಡುದಕ್ಕೆ ಸಂಪಾದಕನು ವಿಷಾದಿಸಬೇಕಾಗಿದೆ. ಸಂದರ್ಭಕ್ಕೆ ಅನುವಾಗದಂತಹ ತಪ್ಪುಗಳನ್ನು ಮಾತ್ರ ಇಲ್ಲಿ ಎತ್ತಿ ತೋರಿಸಿದೆ. ಓದುಗರು ಇವುಗಳನ್ನು ಗಮನಿಸಬೇಕಾಗಿ ಪ್ರಾರ್ಥನೆ.

## ಪರಿಚಯ

| ತಪ್ಪು | ಪು. ಸಾ. | ಒಪ್ಪು |
|---|---|---|
| ನೆನೆವು ಬೇಕೆ | (೬—೧೨) | ನೆನೆವುದೇಕೆ |
| ಬಿಂಬಿಸಿಲನೇ | (೧೪—೧೮) | ಬೆಂಬಿಸಿಲನೇ |
| ನೆಳಲು, ಬಿಸಿಲು, ಕೆರೆ, | (೧೫— ೮) | ನೆಳಲುಬಿಸಿಲು ಕೆರೆ, |
| ಆತನಿಂದ ಪ್ರಾಪ್ತ | (೨೦— ೩) | ಆತನಿಂದ ವ್ಯಾಪ್ತ |
| ತಲ್ಲೀನ | (೨೧—೧೫) | ಇಂತಹ ತಲ್ಲೀನ |
| ಚಿತ್ರಸೃಷ್ಟಿ | (೨೧—೨೪) | ಚಿತ್ರಸೃಷ್ಟಿ— |
| ಜೀವ-ರಾಗ— | (೨೧—೨೫) | —ಜೀವ-ರಾಗ- |
| ಕುಸುರು, ಕುಸುರಿನ | (೨೪— ೭) | ಕುಸುರು ಕುಸುರಿನ |
| ಸಿಡಿಲಿನ ಮುಡುಗು | (೨೪—೨೫) | ಸಿಡಿಲಿನ ಗುಡುಗು |
| ಪ್ರಸಾದವನ್ನು | (೨೫— ೭) | ಪ್ರಾಸಾದವನ್ನು |
| ಅಷ್ಟು ಪರಿಶುದ್ಧವು | (೩೧— ೯) | ಎಷ್ಟು ಉತ್ಕಟವು ಅಷ್ಟು ಪರಿಶುದ್ಧವು |

## ಚಿತ್ರಸೃಷ್ಟಿ

| ತಪ್ಪು | ಪು. ಸಾ. | ಒಪ್ಪು |
|---|---|---|
| ತಲೆವಾಗಿರಿದಿರಿದಿರಲ್ಲಿ | (೧೦—೧೩) | ತಲೆವಾಗಿರಿದರಿದಿರಲ್ಲಿ |
| ,, | (೧೦—೧೪) | ,, |
| ಪೆಂಪೆಂಗಿಂ | (೧೧— ೬) | ಪೆಂಪಿಂಗಿಂ |
| ವೊಸಬನ | (೧೧—೧೬) | ಪೊಸಬನ |
| ೧೪ ಮಾರ್ಚ ೧೯೪೦ | (೨೫— ) | ೧೪ ಮಾರ್ಚ ೧೯೩೦ |
| ಜಳದುರ್ಬಟೆ | (೩೬—೧೪) | ಜಳದುರ್ಬಟಿ |
| ಇವೇ ನದ್ಭುತವೊ | (೩೭—೧೩) | ಇದೇನದ್ಭುತವೊ |

| | | |
|---|---|---|
| ಬೆಳ್ವಳಕನೇ | (೩೮— ೪) | ಬೆಳ್ವೆಳಕನೇ |
| ಸಾಲೆಎಸೆದುಂದು | (೪೧—೨೧) | ಸಾಲೆಸೆವುದು |
| ನಲ್ಲಣೆಸೊ | (೪೨— ೫) | ನಲ್ಲುಣೆಸೊ |
| ತೊತ್ತಳಿಂ ದುಳಿದು | (೪೬— ೮) | ತೊತ್ತಳಿಂ ದುಳಿದು |
| ಸವಿಯುತ | (೪೮— ೬) | ಸವಿಯುತು |
| ಕಂಡೆಪೆಂ | (೪೮—೧೦) | ಕಂಡಪೆಂ |
| ಪೆಂಪಿನಿತೊ, | (೪೯—೧೯) | ಪೆಂಪೆನಿತೊ |
| ತ್ರಮಿದು ! | (೫೨— ೫) | ತ್ರವಿದು ! |
| ಯೊದೆಗಿದು | (೫೩— ೪) | ಯೊದಗಿದು |
| ಪುಡುವಲಿ | (೫೩— ೬) | ಪಡುವಲಿ |
| ಸಿಂದರಚುತೆ | (೫೪— ೧೩) | ಸಿಂದರಿಚುತೆ |
| ಕಡಲಮಿದಿ | (೫೫—೧೩) | ಕಡಲನಿದಿ |
| ಕಳವಳಗೊಂಡು | (೫೫—೧೧) | ಕವಳಂಗೊಂಡು |
| ನೆಲ್ವೆಳಕು | (೫೮—೧೦) | ನಲ್ವೆಳಕು |
| ನಳಿಯುತೊ | (೬೦—೧೨) | ನಲಿಯುತೊ |
| ಸೊಗಯಿಸುಪುದು | (೬೪— ೪) | ಸೊಗಯಿಸುವುದು |
| ಕರುನಾಡಿನಂದವುಂ | (೭೩—೧೬) | ಕರುನಾಡಿನಂದಮಿದು |
| ವಿರಜಿಸಿ | (೭೩—೧೭) | ವಿರಚಿಸಿ |
| ಬಿಸುಗೆಯುಲರ | (೮೮— ೭) | ಬಿಸುಗೆಯೆಲರ |
| ಬರಿಯೆಲ್ಗಳಿಂ | (೧೦೧— ೯) | ಬರಿಯೆಲುಂಗಳಿಂ |
| ಈದಿನದೆ | (೧೩೩—೧೧) | ಈದಿನದಿ |

